CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧, ೨೦೦೫ (ಭಾದ್ರಪದ ೧೦, ಶಕವರ್ಷ ೧೯೨೭) | ಸಂಚಿಕೆ ೩೫ |
| --- | --- | --- |

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಭೂಮಾಪನ ಇಲಾಖೆ**

**ಭೂಮಾಪನ ಆಯುಕ್ತರ ಕಾರ್ಯಾಲಯ, ಕೆ.ಆರ್.ವೃತ್ತ, ಬೆಂಗಳೂರು-1**

**ಟೆಂಡರ್-ಕಂ-ಬಹಿರಂಗ ಹರಾಜು**

**ಸಂಖ್ಯೆ: ಉಗ್ರಾಣ (2) ವಿವಿಧ 6/95-96, ದಿನಾಂಕ:18ನೇ ಆಗಸ್ಟ್, 2005**

**ವಿಷಯ:** ಭೂಮಾಪನ ಕಾರ್ಯಾಲಯದಲ್ಲಿ ಅನುಪಯುಕ್ತ ಪೀಠೋಪಕರಣ, ಹಳೆಯ ಯಂತ್ರಗಳು ವಗೈರೆಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಭೂಮಾಪನ ಆಯುಕ್ತರ ಕಾರ್ಯಾಲಯ, ಕೆ.ಆರ್.ವೃತ್ತ, ಬೆಂಗಳೂರು-1 ಕಛೇರಿಗೆ ಸೇರಿದ ಅನುಬಂಧ-1ರಲ್ಲಿ ನಮೂದಿಸಲಾದ ಅನುಪಯುಕ್ತ ಪೀಠೋಪಕರಣ, ಹಳೆಯ ಯಂತ್ರಗಳನ್ನು ಹಾಲಿ ಇರುವ ಸ್ಥಿತಿಯಲ್ಲಿ ದಿನಾಂಕ: 26.09.2005ರಂದು ಪೂರ್ವಾಹ್ನ 11.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಐಟಂವಾರು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುವುದು.

**ಷರತ್ತುಗಳು**

1. ಟೆಂಡರ್ ಅರ್ಜಿಯನ್ನು ಖಾಲಿ ಕಾಗದದಲ್ಲಿ ಐಟಂವಾರು ದರ ನಮೂದಿಸಿ ಸಲ್ಲಿಸಬೇಕು.
2. ಟೆಂಡರ್ ಲಕೋಟೆಯನ್ನು ಮೊಹರು ಹಾಕಿ ಭೂಮಾಪನ ಆಯುಕ್ತರು, ಬೆಂಗಳೂರು-1, ಇವರ ಹೆಸರಿನಲ್ಲಿ ತೆಗೆದ ರೂ.5,000-00ಗಳ ಡಿ.ಡಿ.ಯೊಂದಿಗೆ ಅಂಚೆ ಮೂಲಕ ಅಥವಾ ಖುದ್ದಾಗಿ ದಿನಾಂಕ:24.09.2005 ಸಂಜೆ 4.00 ಗಂಟೆಯೊಳಗೆ ಸಲ್ಲಿಸಬೇಕು.
3. ರೂ.5000.00 ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.
4. ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಯನ್ನು ಬಿಡ್‌ದಾರರ ಹಾಗೂ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಆಫೈರು ಬಿಡ್ಡು ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಟ ಮೊತ್ತವನ್ನು ಅಂಗೀಕರಿಸಲಾಗುವುದು.
5. ಹರಾಜಿನಲ್ಲಿ ಭಾಗವಹಿಸುವವರು ರೂ.5000.00 (ರೂ.ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
6. ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸಿದಲ್ಲಿ ರೂ.5000.00 ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
7. ಯಶಸ್ವಿ ಬಿಡ್ಡುದಾರರು: ಟೆಂಡರ್‌ದಾರರು ಠೇವಣಿ ಮೊಬಲಗು ಹೊರತುಪಡಿಸಿ ಗರಿಷ್ಟ ಬಿಡ್: ಟೆಂಡರ್ ಮೊತ್ತದ ಶೇಕಡಾ 25ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ಟೆಂಡರ್ ಹಣವನ್ನು ಸಂಬಂಧಿಸಿದ ಅಧಿಕಾರಿಗಳು ಅನುಮೋದಿಸಿದ ನಂತರ ಶೇಕಡ 75 ಭಾಗ ಮೊಬಲಗು ನಿಯಮಾನುಸಾರ ತೆರಿಗೆ ಸೇರಿಸಿ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ 7 ದಿನಗಳೊಳಗಾಗಿ ಈ ಕಛೇರಿಯಿಂದ ಅನುಪಯುಕ್ತ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗತಕ್ಕದ್ದು. ಶೇಕಡಾ 25 ಭಾಗ ಸ್ಥಳದಲ್ಲಿ ಪಾವತಿಸಲು ತಪ್ಪಿದಲ್ಲಿ ಅವರು ನೀಡಿರುವ ಠೇವಣಿ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಈ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ.
8. ಯಶಸ್ವಿ ಬಿಡ್ಡುದಾರರು: ಟೆಂಡರ್‌ದಾರರು ಬಿಡ್ ಮೊಬಲಗಿಗೆ ನಿಯಮಾನುಸಾರ ಮಾರಾಟ ತೆರಿಗೆ ಹಾಗೂ ಇತರೆ ತೆರಿಗೆಗಳನ್ನು ಪಾವತಿಸಬೇಕು.

9. ಯಶಸ್ವಿ ಬಿಡ್ದಾರರು: ಟೆಂಡರ್‌ದಾರರು ಹೊರತುಪಡಿಸಿ ಉಳಿದವರಿಗೆ ಠೇವಣಿ ಹಣ: ಡಿ.ಡಿ.ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಹಿಂದಿರುಗಿಸಲಾಗುವುದು.
10. ಯಶಸ್ವಿ ಬಿಡ್‌ದಾರರು: ಟೆಂಡರ್‌ದಾರರು ಬಿಡ್ ಮೊಬಲಗು ಪೂರ್ತಿ ಪಾವತಿಸಿ ಸಂಬಂಧಿಸಿದ ಅನುಪಯುಕ್ತ ಸಾಮಗ್ರಿಗಳನ್ನು ನಿಗದಿಪಡಿಸಲಾದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದರೆ ಅವರು ಪಾವತಿಸಿದ ಠೇವಣಿ ಹಾಗೂ ಶೇಕಡಾ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಈ ಬಗ್ಗೆ ಬಿಡ್‌ದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
11. ಹರಾಜು ಕೈಗೊಳ್ಳುವ, ರದ್ದುಪಡಿಸುವ, ಮುಂದೂಡುವ ಹಾಗೂ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.
12. ಅನುಬಂಧ-1ರಲ್ಲಿ ತಿಳಿಸಲಾದ ಅನುಪಯುಕ್ತ ವಸ್ತುಗಳ ಪ್ರಮಾಣದಲ್ಲಿ ವ್ಯತ್ಯಾಸ ಕಂಡುಬಂದರೆ ಹರಾಜಿನ ನಂತರ ನಿಖರವಾದ ದಾಸ್ತಾನು ಮಾತ್ರ ಹಸ್ತಾಂತರಿಸಿ ಐಟಂವಾರು ಬಿಡ್ ಮೊಬಲಗು ಸ್ವೀಕರಿಸಲಾಗುವುದು.
13. ಅನುಪಯುಕ್ತ ಸಾಮಗ್ರಿಗಳನ್ನು ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

**ಅನುಬಂಧ-1**

| ಕ್ರಮ ಸಂಖ್ಯೆ | ದಾಸ್ತಾನು ವಸ್ತುಗಳ ವಿವರಗಳು | ಪರಿಮಾಣ ಸಂಖ್ಯೆ | ಷರಾ |
|---|---|---|---|
| 1. | ಪೋಸ್ಟಲ್ ಫ್ರಾಂಕಿಂಗ್ ಮಿಷನ್ (ಮ್ಯಾನ್ಯುಯೆಲ್) | 61 | |
| 2. | ವಾಹನದಲ್ಲಿ ಉಪಯೋಗಿಸಿದ ಹಳೆಯ ಬ್ಯಾಟರಿಗಳು | 22 | |
| 3. | ಕಂಪ್ಯೂಟರ್ ರಿಬ್ಬನ್ | 40 | |
| 4. | ಹಳೆಯ ಯು.ಪಿ.ಎಸ್. ಬ್ಯಾಟರಿ | 01 | |
| 5. | ಪಂಪ್ ಸೆಟ್ (ನೀರೆತ್ತುವ ಯಂತ್ರ) | 01 | |
| 6. | ವಾಹನದ ಹಳೆಯ ಟೈರುಗಳು | 16 | |
| 7. | ಹಳೆಯ ಪ್ರಿಂಟಿಂಗ್ ಪ್ಲೇಟುಗಳು | 1000 | |
| 8. | ಬೆಂಕಿ ನಂದಿಸುವ ಉಪಕರಣ (ಫೈರ್ ಎಕ್ಸಿಟಿಂಗ್ ಮಿಷನ್) | 26 | |
| 9. | ಸೈಕ್ಲೊಸ್ಟೈಲ್ ಮಿಷನ್ (ನಕಲು ತಯಾರಿಸುವ ಯಂತ್ರ) | 01 | |
| 10. | ಟ್ಯೂಬ್‌ಲೈಟ್ ಫ್ರೇಮುಗಳು | 25 | |
| 11. | ಏರ್ ಕಂಡೀಷನರ್ | 02 | |

ಆಯುಕ್ತರ ಪರವಾಗಿ,
ಪಿ.ಆರ್.478 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

## ಸಾರ್ವಜನಿಕ ಆರೋಗ್ಯ ಸಂಸ್ಥೆ

## ಸಹ ನಿರ್ದೇಶಕರು (ಪ್ರ)ರವರ ಕಛೇರಿ, ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು-1

## ಟೆಂಡರ್-ಕಂ-ಬಹಿರಂಗ ಹರಾಜು

## ಸಂಖ್ಯೆ: ಸಾಆಸಂ:ಸರಬ:9:2004-05, ದಿನಾಂಕ:24ನೇ ಆಗಸ್ಟ್, 2005

**ವಿಷಯ:** ಸಹ ನಿರ್ದೇಶಕರು ಸಾರ್ವಜನಿಕ ಆರೋಗ್ಯ ಸಂಸ್ಥೆ, ಶೇಷಾದ್ರಿ ರಸ್ತೆ, ಬೆಂಗಳೂರು-1 ಇವರ ಕಛೇರಿಗೆ ಸೇರಿದ ಅನುಪಯುಕ್ತ ಸಲಕರಣೆ ಮತ್ತು ಇತರೆ ವಸ್ತುಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಸಹ ನಿರ್ದೇಶಕರು (ಪ್ರ) ಸಾರ್ವಜನಿಕ ಆರೋಗ್ಯ ಸಂಸ್ಥೆ, ಶೇಷಾದ್ರಿರಸ್ತೆ, ಬೆಂಗಳೂರು-1, ಇವರ ಕಛೇರಿಗೆ ಸಂಬಂಧಿಸಿದ ಅನುಪಯುಕ್ತ ಸಲಕರಣೆ ಮತ್ತು ಇತರೆ ವಸ್ತುಗಳನ್ನು ಹಾಲಿ ಇರುವ ಸ್ಥಿತಿಯಲ್ಲಿ ದಿನಾಂಕ: 29.09.2005 ರಂದು ಅಪರಾಹ್ನ 3.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಐಟಂವಾರು ಟೆಂಡರ್, ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಷರತ್ತುಗಳ ಮಾಹಿತಿಗಾಗಿ ಹಾಗೂ ಅನುಪಯುಕ್ತ ವಸ್ತುಗಳ ವಿವರಣೆಗಾಗಿ ರಜಾ ದಿನಗಳನ್ನು ಹೊರತು ಪಡಿಸಿ ಉಳಿದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಮಾಹಿತಿ ಪಡೆಯಬಹುದಾಗಿದೆ.

ಪಿ.ಡಿ.86 ಸಹ ನಿರ್ದೇಶಕರು (ಪ್ರಯೋಗಾಲಯ).

## ಸಹಕಾರ ಇಲಾಖೆ

## ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು-52,

## ನಮೂನೆ-1

## ಅಧಿಸೂಚನೆ, ದಿನಾಂಕ: 5ನೇ ಆಗಸ್ಟ್, 2005

ಸಹಕಾರ ಇಲಾಖೆಯ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿ ಅಧೀಕ್ಷಕರಾಗಿ ಕೆಲಸ ನಿರ್ವಹಿಸುತ್ತಿರುವ **ಶ್ರೀಮತಿ ಉಮಾಗೋವಿಂದರಾವ್** ಅವರ ಹೆಸರನ್ನು **ಶ್ರೀಮತಿ ಉಮಾ ಶ್ರೀನಿವಾಸ್** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ.91 ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು.

**IN THE COURT OF THE DISTRICT AND SESSIONS JUDGE AT MADIKERI**
**P & S.C. NO.2 OF 2001**

In the matter of last WILL and TESTAMENT of late Shri Kallichanda N. Mandanna.

**Petitioner:** Shri Kallichanda N. Muddappa
S/o Late. Nanjappa,
46 Years, Sulugodu Village, Ponnappasanthe Post, South Kodagu.

**Respondents:** Nil

**TO WHOMSOEVER IT MAY CONCERN**

Take notice that the above named petitioner had filed an application to this Court for grant of succession certificate in respect of the WILL Dated: 20.06.2000 executed by Shri Kallichanda N. Mandanna who died on 17.10.2000.

The above petition is posted to 17.09.2005 for hearing at 10.45 a.m. before this Court. Person desiring to oppose the same may appear on the said date and time either personally or through his pleader failing the matter will be heard and decided exparte.

BY ORDER OF THE COURT
Chief Administrative Officer, District &
Sessions Judge's Court, Kodagu, Madikeri.

PD-87

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಹಿಸತೋನಿ/ ಶಿ/ ತಾಸ/ 2005-06, ದಿನಾಂಕ:10ನೇ ಆಗಸ್ಟ್, 2005**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ ಗಾಂಧಿಪಾರ್ಕ್, ಶಿವಮೊಗ್ಗ ಅಧೀನದಲ್ಲಿ ಬರುವ ಜಿಲ್ಲೆಯ ತೋಟಗಾರಿಕಾ ಕ್ಷೇತ್ರಗಳಲ್ಲಿನ ಅಡಿಕೆ ಫಸಲನ್ನು ಟೆಂಡರ್ ಮೂಲಕ ವಿಲೇವಾರಿ ಮಾಡಲು ಈ ಕೆಳಕಂಡಂತೆ ದಿನಾಂಕವನ್ನು ನಿಗದಿಪಡಿಸಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ಹೆಸರು | ಪಸಲಿನ | | ಟೆಂಡರ್‌ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ಸ್ಥಳ | ಇ.ಎಂ.ಡಿ. ಮೊತ್ತ | ಇ.ಎಂ.ಡಿ. ಪೂರ್ಣ ಮೊತ್ತ ಹಾಗೂ ಟೆಂಡರ್ ಮೊತ್ತಕ್ಕೆ (ಶೇ.50ರಷ್ಟು) ಡಿ.ಡಿ. ತೆಗೆಯುವ ವಿಳಾಸ |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1. | ತುಂಗಾ ತೋಟಗಾರಿಕೆ ಕ್ಷೇತ್ರ, ಶಿವಮೊಗ್ಗ. | ಅಡಿಕೆ | 01.07.05 ರಿಂದ 31.01.06 | 12.09.05 ಸಂಜೆ 5.00 | 13.09.05 ಮಧ್ಯಾಹ್ನ 12.00 | 13.09.05 ಮಧ್ಯಾಹ್ನ 1.00 | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾ.ವ., ಶಿವಮೊಗ್ಗ. | 500 | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾ.ವ., ಶಿವಮೊಗ್ಗ. |
| 2. | ಸೀಬಿನಕೆರೆ ತೋಟಗಾರಿಕೆ ಕ್ಷೇತ್ರ | ಅಡಿಕೆ | 01.07.05 ರಿಂದ 31.01.06 | 14.09.05 ಸಂಜೆ 5.00 | 15.09.05 ಮಧ್ಯಾಹ್ನ 12.00 | 15.09.05 ಮಧ್ಯಾಹ್ನ 1.00 | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ | 10000 | ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ಸೀಬಿನಕೆರೆ, ತೀರ್ಥಹಳ್ಳಿ. |
| 3. | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ | ಅಡಿಕೆ | 01.07.05 ರಿಂದ 31.01.06 | 14.09.05 ಸಂಜೆ 5.00 | 15.09.05 ಮಧ್ಯಾಹ್ನ 12.30 | 15.09.05 ಮಧ್ಯಾಹ್ನ 1.30 | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ | 10000 | ಸಹಾಯಕ ತೋಟಗಾರಿಕೆ ಅಧಿಕಾರಿ (ರಾವ) ಕುರುವಳ್ಳಿ, ತೀರ್ಥಹಳ್ಳಿ. |

**ಟೆಂಡರ್‌ನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ (ಷರತ್ತು)ಗಳು:**

1. ಫಸಲನ್ನು ಟೆಂಡರ್ ಮೂಲಕ ಮಾತ್ರ ವಿಲೇವಾರಿ ಮಾಡಲಾಗುವುದು. ಬಹಿರಂಗ ಹರಾಜಿಗೆ ಅವಕಾಶವಿರುವುದಿಲ್ಲ.
2. ಫಸಲಿನ ಟೆಂಡರ್‌ನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ.25/- (ರೂ. ಇಪ್ಪತ್ತೈದು) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ.
3. ಟೆಂಡರ್ ಫಾರಂನ್ನು ಭರ್ತಿ ಮಾಡಿ ಇ.ಎಂ.ಡಿ. ಪೂರ್ಣ ಮೊತ್ತ ಮತ್ತು ಟೆಂಡರ್ ಮೊತ್ತದ ಶೇ.50ರಷ್ಟು ಹಣವನ್ನು ಆಯಾ ಕ್ಷೇತ್ರದ ಅಧಿಕಾರಿಗಳ ಹೆಸರಿನಲ್ಲಿ ಪ್ರತ್ಯೇಕ ಕ್ರಾಸ್ ಡಿ.ಡಿ. ಯೊಂದಿಗೆ ಲಗತ್ತಿಸಿ ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.
4. ಟೆಂಡರ್ ಫಾರಂನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾವ) ಶಿವಮೊಗ್ಗ ಅಥವಾ ಆಯಾ ಕ್ಷೇತ್ರದ ಅಧಿಕಾರಿಗಳ ಕಛೇರಿಯಲ್ಲಿ ಪಡೆಯತಕ್ಕದ್ದು.
5. ತುಂಗಾ ತೋಟಗಾರಿಕೆ ಕ್ಷೇತ್ರಕ್ಕೆ ಸಂಬಂಧಿಸಿದ ಡಿ.ಡಿ.ಯನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾವ) ಶಿವಮೊಗ್ಗರವರ ಹೆಸರಿಗೆ ತೆಗೆಯಬೇಕು.
6. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಅಪೂರ್ಣ ಹಾಗೂ ಲೋಪದೋಷಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರಕ್ಕೆ ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ಧರಾಗಿರಬೇಕು.
8. ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿನದೊಳಗಾಗಿ ಉಳಿದ ಶೇ.50ರ ಟೆಂಡರ್ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.

9. ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೆ ನೋಡಿಕೊಳ್ಳತಕ್ಕದ್ದು.
10. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ (ಜನವರಿ 31, 2006) ಕಟಾವು ಸೀಮಿತಗೊಳಿಸಬೇಕು.
11. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.
12. ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.
13. ಟೆಂಡರ್‌ದಾರರು ಇಲಾಖೆಯ ಎಲ್ಲ ನಿಬಂಧನೆಗಳಿಗೆ ಬದ್ದರಾಗಿರಬೇಕು. ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಹಣ ಮತ್ತು ಶೇ.50ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
14. ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.
15. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಇಲಾಖಾ ಕಛೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.
16. ಹೆಚ್ಚಿನ ಮಾಹಿತಿಗಾಗಿ ಕಛೇರಿ ಅಧಿಕಾರಿಗಳನ್ನು ಭೇಟಿಯಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಶಿವಮೊಗ್ಗ.

ಪಿ.ಆರ್.471

## WATER RESOURCES DEPARTMENT
## OFFICE OF THE EXECUTIVE ENGINEER, WRD, K.P.C. DIVISION NO.3, BHATAMBRA
## TIME EXTENSION-VI
**No. EE/ KPC.Dn-3/PB/ TIME-EXTN./2005-06/ 728, Dated: 8th August, 2005**

Tenders on Turnkey basis called vide this office notification No. KPC-3/AE-1/TND/2005-06/112, Dated: 03.05.2005 and Time Extensions notified vide

1) EE/KPC.Dn-3/PB/TIME-EXTN/2005-06/312 Date:06.06.2005.
2) EE/KPC.Dn-3/PB/TIME-EXTN/2005-06/397 Date:20.06.2005.
3) EE/KPC.Dn-3/PB/TIME-EXTN/2005-06/427 Date:27.06.2005.
4) EE/KPC.Dn-3/PB/TIME-EXTN/2005-06/520 Date:11.07.2005.
5) EE/KPC.Dn-3/PB/TIME-EXTN/2005-06/630 Date:25.07.2005.

| Sl. No. | Particulars | As per previous Notification (As per Time Extension V) | Now Rescheduled |
|---|---|---|---|
| 1 | 2 | 3 | 4 |
| 1. | Last Date for application to register user ID and password for e-tendering. | 06.08.2005 | 22.08.2005 |
| 2. | Dates for application for blank pre-qualification documents (manual/ e-tendering). | 02.06.2005 to 08.08.2005 | 02.06.2005 to 24.08.2005 |
| 3. | Last date for submission of original DD/Banker's cheque towards blank pre-qualification tender booklets, those have applied through e-tendering. | 09.08.2005 | 25.08.2005 |
| 4. | Dates of issue of blank pre-qualification schedules (manual tendering) | 10.08.2005 to 11.08.2005 | 26.08.2005 to 27.08.2005 |
| 5. | Access to blank e-prequalification documents (e-tendering) | 10.08.2005 to 11.08.2005 | 26.08.2005 to 27.08.2005 |
| 6. | Last date for submission of completed pre-qualification documents (manual/ e-tendering) | 16.08.2005 | 02.09.2005 |
| 7. | Date of opening of sealed pre-qualification documents. | 17.08.2005 | 03.09.2005 |
| 8. | Declaration of list of pre-qualified bidders. | 20.08.2005 | 08.09.2005 |
| 9. | Dates for issue of blank tender documents (manual tendering) | 20.08.2005 to 22.08.2005 | 08.09.2005 to 12.09.2005 |
| 10. | Access to blank tender documents (e-tendering) | 20.08.2005 to 25.08.2005 | 08.09.2005 to 16.09.2005 |
| 11. | Date of pre-bid conference. | 22.08.2005 | 09.09.2005 |
| 12. | Submission of completed tender documents (e-tendering) | 20.08.2005 to 25.08.2005 | 08.09.2005 to 16.09.2005 |

| 1 | 2 | 3 | 4 |
|---|---|---|---|
| 13. | Submission of completed tender documents (manual tendering) | 25.08.2005 | 16.09.2005 |
| 14. | Last date for submission of original EMD, those who have applied through e-tendering. | 27.08.2005 | 19.09.2005 |
| 15. | Opening of section-II of Part-II | 29.08.2005 | 21.09.2005 |
| 16. | Opening of Section-I of Part-II | 31.08.2005 | 23.09.2005 |

The remaining terms and conditions holds good as notified.

Further details can be had from the office of the undersigned during office hours.

Executive Engineer, WRD.,
K.P.C. Division No.3, Bhatambra.

PR-472

## ಜಲಸಂಪನ್ಮೂಲ ಇಲಾಖೆ
## (ಸಣ್ಣ ನೀರಾವರಿ)
## ಕಾರ್ಯಪಾಲಕ ಅಭಿಯಂತರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಂಗಳೂರು
## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಸನೀವಿ/ಬೆಂ/ಪಿಬಿ/ಎಲೆಮಲ್ಲಪ್ಪ ಶೆಟ್ಟಿ/2005-06/01, ದಿನಾಂಕ:12ನೇ ಆಗಸ್ಟ್, 2005**

**(ಎರಡು ಲಕೋಟೆ ಪದ್ಧತಿ)**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಮೊದಲನೆ ದರ್ಜೆ ಗುತ್ತಿಗೆದಾರರಿಂದ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಂದ ಎರಡು ಲಕೋಟೆ ಅಂದರೆ ತಾಂತ್ರಿಕ ಮತ್ತು ಆರ್ಥಿಕ ಬಿಡ್ ಪದ್ಧತಿಯಲ್ಲಿ ಐಟಂ ರೇಟ್ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಕಾಮಗಾರಿಯ ವಿವರ ಈ ಕೆಳಗೆ ತೋರಿಸಿದ ನಮೂನೆಯಲ್ಲಿ ಇರುತ್ತದೆ.

ಗುತ್ತಿಗೆದಾರರು ಅಂದರೆ ವೈಯಕ್ತಿಕ/ಫರ್ಮ್/ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ ಫರ್ಮ್ ಅಥವಾ ಎರಡು ಹೊಂದಿರುವ ಪ್ರಮುಖ ಪಾಲುದಾರರು. ಖಾಲಿ ತಾಂತ್ರಿಕ ಮತ್ತು ಆರ್ಥಿಕ ಬಿಡ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿ ಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಲಿಖಿತ ಅರ್ಜಿ ಮೂಲಕ ನಿಗದಿ ಪಡಿಸಿದ ಮೊತ್ತವನ್ನು ಪಾವತಿಸುವ ಮೂಲಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಂದ ಪಡೆಯಬಹುದು ಮತ್ತು ಭರ್ತಿ ಮಾಡಿದ ಟೆಂಡರ್ ದಾಖಲೆಯನ್ನು ಇ.ಎಂ.ಡಿ. ಮೊತ್ತದೊಂದಿಗೆ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಬಹುದು. ಗುತ್ತಿಗೆ ಪಡೆಯುವಲ್ಲಿ ಯಶಸ್ವಿಯಾಗದ ಬಿಡ್‌ದಾರರ ಇ.ಎಂ.ಡಿ. ಮೊತ್ತವನ್ನು ಟೆಂಡರ್ ತೆರೆದ 90 ದಿನಗಳ ನಂತರ ಹಿಂತಿರುಗಿಸಲಾಗುವುದು.

**ಕಾಮಗಾರಿಯ ವಿವರಗಳು**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಲಕ್ಷ ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ದ್ವಿಪ್ರತಿಗಳು) ತೆರಿಗೆ ಪ್ರತ್ಯೇಕ (ಹಿಂದಿರುಗಿಸಲಾಗದು) (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣ ಗೊಳಿಸ ಬೇಕಾದ ಅವಧಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಂಗಳೂರು ಪೂರ್ವ ತಾ: ಬಿದರಹಳ್ಳಿ ಹೋಬಳಿ ಎಲೆ ಮಲ್ಲಪ್ಪ ಶೆಟ್ಟಿ ಕೆರೆಯ ಹೆಚ್ಚುವರಿ ನೀರನ್ನು ಹೊಸಕೋಟೆ ದೊಡ್ಡಕೆರೆಗೆ ಸಾಗಿಸುವ ಏತ ನೀರಾವರಿ ಯೋಜನೆಯ ನಿರ್ಮಾಣ (ಸಿವಿಲ್ ಕಾಮಗಾರಿ) | 104.19 | 1.05 | 10,000/- + ಕೆ.ಎಸ್.ಟಿ. ಶೇಕಡಾವಾರು 12.5% | ಒಂದನೇ ದರ್ಜೆ | 18 ಕ್ಯಾಲೆಂಡರ್ ತಿಂಗಳು ಮಳೆಗಾಲ ಸೇರಿ |

ಎರಡು ಲಕೋಟೆ ಟೆಂಡರ್ ಸಲ್ಲಿಸುವಲ್ಲಿ ತಾಂತ್ರಿಕ ಬಿಡ್ ಭಾಗ-1 ಮತ್ತು ಆರ್ಥಿಕ ಬಿಡ್ ಭಾಗ-2 ಎಂಬ ಪದ್ಧತಿಯನ್ನು ಅನುಸರಿಸುವುದು. ತಾಂತ್ರಿಕ ಬಿಡ್ಡಿನ ಮೌಲ್ಯ ಮಾಪನವನ್ನು ಅರ್ಜಿದಾರರು ಸಲ್ಲಿಸಿರುವ ವಿವರಗಳ ಆಧಾರದ ಮೇಲೆ ಮಾಡಲಾಗುವುದು.

ಗುತ್ತಿಗೆದಾರರು ಖಾಲಿ ಟೆಂಡರ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಿಂದ ದಸ್ತಾವೇಜುಗಳಿಗೆ ನಿಗದಿಪಡಿಸಿದ ಮೊತ್ತವನ್ನು (ಹಿಂದಿರುಗಿಸಲಾಗುವು ದಿಲ್ಲ) ಪಾವತಿಸಿ ದಸ್ತಾವೇಜುಗಳನ್ನು ಪಡೆಯಬಹುದು.

**ಹಣ ಪಾವತಿಸುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ನಗದೀ ಕರಿಸುವಂತಿರತಕ್ಕದ್ದು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 10–10–2005 (ಸಂಜೆ 5.30 ರವರೆಗೆ)

2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ: 17–10–2005 ಮತ್ತು 18–10–2005 (ಸಂಜೆ 5.30 ರವರೆಗೆ)

3) ಭರ್ತಿ ಮಾಡಿದ ಮೊಹರಬಂದ ಟೆಂಡರ್ ದಸ್ತಾವೇಜಗಳನ್ನು ಸ್ವೀಕರಿಸುವ ಕೊನೆಯ ದಿ: 25–10–2005 (ಸಂಜೆ 5.30 ರವರೆಗೆ)

4) ಭರ್ತಿ ಮಾಡಲಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ

(ಅ) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರ ಕಾರ್ಯಾಲಯದಲ್ಲಿ

(ಆ) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ದ) ವಲಯ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು.

5) ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದಿರಬೇಕು. ಅಥವಾ ಕಾರ್ಯಪಾಲಕ ಅಭಿಯಂತರರರ ಹೆಸರಿಗೆ ಎನ್.ಎಸ್.ಸಿ.ಯನ್ನು ಟೆಂಡರ್ ಸಲ್ಲಿಸುವ ಸಂದರ್ಭದಲ್ಲಿ ಪ್ಲೆಡ್ಜ್ ಮಾಡಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು. ಈ ಇ.ಎಂ.ಡಿ.ಯನ್ನು ಟೆಂಡರ್ ತೆರೆದ ದಿನಾಂಕದಿಂದ 180 (ಒಂದುನೂರಾ ಎಂಭತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.

6) ಈ ಕೆಳಕಂಡ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.

ಅ) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರ

ಆ) ಇತ್ತೀಚಿನ ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ

ಇ) ಕರ್ನಾಟಕ ರಾಜ್ಯದ ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.

ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ದಿನಾಂಕ: 10–10–2005 ಅಥವಾ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.

7) ತಾಂತ್ರಿಕ ಬಿಡ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 26–10–2005 ರಂದು ಮಧ್ಯಾಹ್ನ 4.00 ಗಂಟೆಗೆ ಅಥವಾ ಅನುಕೂಲವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ–1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1. ವೈಯಕ್ತಿಕ ಫರ್ಮ್/ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.
   2005–06ನೇ ಆರ್ಥಿಕ ಸಾಲಿನ ಹಿಂದಿನಿಂದ 5 ವರ್ಷಗಳ ವಹಿವಾಟಿನಲ್ಲಿ (2001–02 ರಿಂದ 2005–06);

   1) ಕನಿಷ್ಠ ಎರಡು ಆರ್ಥಿಕ ವರ್ಷದಲ್ಲಿ ರೂ.210.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ್ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು.

      i. ಕಳೆದ 5 ವರ್ಷಗಳಲ್ಲಿ ವರ್ಷ 2005–06ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.

      ii. ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೇ ಒಂದು ಸಿವಿಲ್ ಕಾಮಗಾರಿ (ಶೇಕಡಾ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಕಾಂಕ್ರಿಟ್ ಕೆಲಸ, ಪೈಪ್‌ಲೈನ್ ಕೆಲಸ ಹಾಗೂ ಕಾಲುವೆ ನಿರ್ಮಾಣ) ರೂ.95.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿರ ಬೇಕು. ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತ: ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.

      iii. ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| (ಅ) ಅಗೆತದ ಕೆಲಸ (ಎಲ್ಲಾ ಸ್ಥರಗಳು ಸೇರಿದಂತೆ) | – | 17,682 ಘ.ಮೀ. |
| (ಬ) ಕಾಂಕ್ರೀಟ್ ಕೆಲಸ | – | 464 ಘ.ಮೀ. |
| (ಕ) ಪೈಪ್‌ಲೈನ್ ಕೆಲಸ | – | 3,700 ಘ.ಮೀ. |
| (ಡ) ಅರ್ಥ್ ಫಿಲ್ಲಿಂಗ್ | – | 5,502 ಘ.ಮೀ. |

2) ಅರ್ಜಿದಾರರು ಕೆಳಕಂಡ ಸಾಮರ್ಥ್ಯವನ್ನು ಪ್ರದರ್ಶಿಸುವುದು.

(ಅ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣತರನ್ನು ಹೊಂದಿರಬೇಕು.

(ಆ) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ಥಿ ಅಥವಾ ಹಣರೂಪದಲ್ಲಿ ಕನಿಷ್ಠ ರೂ.100.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು)

(ಇ) ಗುತ್ತಿಗೆದಾರರು ಈ ಕೆಳಕಾಣಿಸಿದ ಯಂತ್ರೋಪಕರಣಗಳನ್ನು ಸ್ವಂತ ಅಥವಾ ಲೀಸ್ ಮೇಲೆ ಹೊಂದಿರತಕ್ಕದ್ದು.

| | | |
|---|---|---|
| ಅ) ಎಕ್ಸ್‌ಕವೇಟರ್/ಪೊಕ್ಲೇನ್ (0.9 ಘ.ಮೀ.ಸಾಮರ್ಥ್ಯ) | : | 2 ಸಂಖ್ಯೆ |
| ಆ) ಲಾರಿಗಳು / ಟಿಪ್ಪರ್‌ಗಳು | : | 5 ಸಂಖ್ಯೆ |
| ಇ) ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ.ಅಡಿ ಸಾಮರ್ಥ್ಯ) | : | 2 ಸಂಖ್ಯೆ |
| ಈ) ವೈಬ್ರೇಟರ್ | : | 2 ಸಂಖ್ಯೆ |
| ಉ) ಪಂಪ್‌ಸೆಟ್ (8 ಹೆಚ್.ಪಿ ಯಿಂದ 20 ಹೆಚ್.ಪಿ) | : | 2 ಸಂಖ್ಯೆ |
| ಊ) ಕ್ರೇನ್/ಚೈನ್ ಪುಲ್ಲಿ (2 ಟನ್ ಸಾಮರ್ಥ್ಯ) | : | 1 ಸಂಖ್ಯೆ |

3. ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್.ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.

4. ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.

ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ಮುಂದೆ ತಿಳಿಸಲಾಗುವ ನಿಗದಿತ ದಿನಾಂಕ ಮತ್ತು ಸಮಯದಂದು ತೆರೆಯಲಾಗುವುದು.

5) ಗುತ್ತಿಗೆದಾರರು ಕಾಮಗಾರಿ ನಿರ್ವಹಿಸುವ ಬಗ್ಗೆ ಅವಶ್ಯಕ ಮಾನವ ಶಕ್ತಿ ಹೊಂದಿರಬೇಕು.

6) ಅಂಚೆ/ಕೊರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದ್ದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

7) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕ ವೆಂದು ಪರಿಗಣಿಸುವುದು.

8) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

9) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು.

10) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶ: ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆ ಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತ: ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದು ಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೆ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.

11) ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಭಾಗ ವಹಿಸುವುದು. ನಂತರ ಕಾಮಗಾರಿಯ ಸ್ಥಳದ ಬಗ್ಗೆ ಯಾವುದೇ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರವಾಗುವುದಿಲ್ಲ.

12) ಟೆಂಡರ್ ಡಾಕ್ಯೂಮೆಂಟಿನ ಭಾಗ–2ರ ಸೆಕ್ಷನ್–1 ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳು ತಿರಸ್ಕರಿಸಲಾಗುವುದು.

13) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

14) ಎರಡು ಲಕೋಟೆ ಮೇಲೆ ಕೆಲಸದ ಹೆಸರು ಹಾಗೂ ಲಕೋಟೆ–1 (ತಾಂತ್ರಿಕ ಬಿಡ್) ಹಾಗೂ ಲಕೋಟೆ–2 (ಆರ್ಥಿಕ ಬಿಡ್) ಎಂದು ಸ್ಪಷ್ಟವಾಗಿ ಬರೆಯತಕ್ಕದ್ದು.

**ರಾಮಾಂಜನಯ್ಯ**
ಕಾರ್ಯಪಾಲಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಬೆಂಗಳೂರು.

ಪಿ.ಆರ್.473

## ಲೋಕೋಪಯೋಗಿ ಇಲಾಖೆ ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು

## ಟೆಂಡರ್ ಪ್ರಕಟಣೆ

## (ಎರಡು ಲಕೋಟೆ ಪದ್ಧತಿಯಲ್ಲಿ)

**ಸಂ.ಕಾಇ:ವಿವಿ: ರಸ್ತೆ ಮತ್ತು ಕಟ್ಟಡ: ಟೆಂಡರ್ ಪ್ರಕಟಣೆ ಸಂಖ್ಯೆ:7:2005-06/ 972-89, ದಿನಾಂಕ:10ನೇ ಆಗಸ್ಟ್, 2005**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಕಾಣಿಸಿರುವ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 2000ರಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿರುವ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಈ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗುತ್ತಿದ್ದು (1) ತಾಂತ್ರಿಕ ಬಿಡ್ (2) ಆರ್ಥಿಕ ಬಿಡ್‌ಗಳನ್ನು ಭರ್ತಿ ಮಾಡಿ ಸಲ್ಲಿಸಬೇಕಾಗಿರುತ್ತದೆ. ಮೊದಲು ತಾಂತ್ರಿಕ ಬಿಡ್‌ನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕವಾಗಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ನಮೂದಿಸಿ, ಈ ಎರಡು ಮೊಹರಾದ ಟೆಂಡರ್‌ಗಳನ್ನು ಬೇರೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಬೇಕು. ಈ ಲಕೋಟೆಯ ಮೇಲ್ಭಾಗದಲ್ಲಿ ಕಾಮಗಾರಿಯ ಹೆಸರು, ಗುತ್ತಿಗೆದಾರರ ಸಂಪೂರ್ಣ ಅಂಚೆ ವಿಳಾಸ ಬರೆದು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಬೇಕು.

1. ಖಾಲಿ ಟೆಂಡರ್ ಫಾರಂಗಾಗಿ ಗುತ್ತಿಗೆದಾರರು ಅರ್ಜಿಗಳನ್ನು ಸಲ್ಲಿಸುವ ದಿನಾಂಕ: 05.10.2005 ವೇಳೆ 5.30 ಗಂಟೆಯವರೆಗೆ.

2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ನಿಗದಿಗೊಳಿಸಿರುವ ದಿನಾಂಕ: 10.10.2005 ವೇಳೆ 5.30 ಗಂಟೆಯವರೆಗೆ.

3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ನಿಗದಿಗೊಳಿಸಿರುವ ದಿನಾಂಕ: 15.10.2005 ವೇಳೆ 4.00 ಗಂಟೆಯವರೆಗೆ.

ಭರ್ತಿ ಮಾಡಿದ ಟೆಂಡರ್‌ಗಳನ್ನು ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತ, ಬೆಂಗಳೂರು ಇವರ ಕಛೇರಿಯಲ್ಲಿಯೂ ದಿನಾಂಕ: 15.10.2005 ವೇಳೆ 4.00 ಗಂಟೆಯವರೆಗೆ ಪಿಡಬ್ಲ್ಯೂಜಿ-65 ಮತ್ತು 66 ಕೆಪಿಡಬ್ಲ್ಯೂಡಿ ಕೋಡ್ ಭಾಗ-2 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 2000ರ ನಿಯಮಗಳಿಗೊಳಪಟ್ಟು ಸ್ವೀಕರಿಸಲಾಗುವುದು.

ಟೆಂಡರುಗಳನ್ನು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ತೆರೆಯಲಾಗುವುದು.

1. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ಸಾಧ್ಯವಾದಲ್ಲಿ ದಿನಾಂಕ: 15.10.2005 ವೇಳೆ 4.30 ಅಥವಾ ನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ವೇಳೆ.
2. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರಿಗೆ ಆರ್ಥಿಕ ಬಿಡ್ ತೆರೆಯುವ ದಿನಾಂಕ ಮತ್ತು ವೇಳೆಯನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಕೆಲಸದ ಮೊತ್ತ (ಲಕ್ಷ ರೂ.ಗಳಲ್ಲಿ) | ಇ.ಎಂ.ಡಿ. ಮೊತ್ತ (ಲಕ್ಷ ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.ಗಳಲ್ಲಿ (ಹಿಂದಿರುಗಿಸ ಲಾಗುವುದಿಲ್ಲ) | ಕಾಮಗಾರಿ ಮುಗಿಸಲು ನಿಗದಿಗೊಳಿಸಿರುವ ಕಾಲಮಿತಿ | ಅರ್ಹ ಗುತ್ತಿಗೆದಾರರ ದರ್ಜೆ | ಟೆಂಡರ್ ಕರೆಯ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ರಾಷ್ಟ್ರೀಯ ಹೆದ್ದಾರಿ 7 ಪರಪ್ಪನ ಅಗ್ರಹಾರ ಗೇಟ್‌ನಿಂದ ನಾಗನಾಥಪುರ ಕೈಗೊಂಡನಹಳ್ಳಿ ಮತ್ತು ರಾಯಸಂದ್ರ ಮುಖಾಂತರ ಸರ್ಜಾಪುರ ರಸ್ತೆಯವರೆಗೆ ಅಭಿವೃದ್ಧಿ (ಜಿ.ಮು.ರಸ್ತೆ 6.60 ಕಿ.ಮೀ.) | 700.00 | 7.00 | 70000 | 12 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 2. | ರಾಷ್ಟ್ರೀಯ ಹೆದ್ದಾರಿ 7 ಎಲೆಕ್ಟ್ರಾನಿಕ್ ಸಿಟಿ ನೀಲಾದ್ರಿಪಾರ್ಕ್, ಬೆಟ್ಟದಾಸಪುರ ಮತ್ತು ಬಸವನಪುರ ಮಾರ್ಗವಾಗಿ ಬೆಂಗಳೂರು ಬನ್ನೇರುಘಟ್ಟ ರಸ್ತೆ ಸೇರುವ ರಸ್ತೆ ಅಭಿವೃದ್ಧಿ (ಜಿ.ಮು.ರಸ್ತೆ 9.50 ಕಿ.ಮೀ) | 990.00 | 9.90 | 99000 | 12 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 3. | ಕುಂದದಹಳ್ಳಿ ಕ್ರಾಸ್‌ನಿಂದ ಹೂಡಿ ಗ್ರಾಮ ರಸ್ತೆ ಅಭಿವೃದ್ಧಿ (ಜಿ.ಮು.ರಸ್ತೆ 5.30 ಕಿ.ಮೀ.) | 500.00 | 5.00 | 50000 | 9 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 4. | ಕೆ.ಆರ್.ಪುರಂ ರಸ್ತೆಯಿಂದ ಸೌಖ್ಯ ಹೋಲಿಸ್ಟಿಕ್ ಕೇಂದ್ರ ಸಾದರ ಮಂಗಲ ಹಾಗೂ ಹೆಚ್.ಕೆ.ಎ. ರಸ್ತೆಯ ಹೋಪ್ ಫಾರಂ ರಸ್ತೆ ಅಭಿವೃದ್ಧಿ (ಸರಪಳಿ 7.60 ಕಿ.ಮೀ. ನಿಂದ 13.50 ಕಿ.ಮೀ.ವರೆಗೆ) | 440.00 | 4.40 | 44000 | 9 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 5. | ರಾಷ್ಟ್ರೀಯ ಹೆದ್ದಾರಿ 7 ಪರಪ್ಪನ ಅಗ್ರಹಾರದಿಂದ ಎಇಸಿಎಸ್ ಬಡಾವಣೆ, ಕೂಡ್ಲು ಮತ್ತು ಹರಳೂರು ಮಾರ್ಗವಾಗಿ ಬೆಂಗಳೂರು ಸರ್ಜಾಪುರ ರಸ್ತೆಗೆ ಸೇರುವ ರಸ್ತೆಯ ಅಭಿವೃದ್ಧಿ ಕೆಲಸ (ಜಿಮುರಸ್ತೆ 6.50 ಕಿ.ಮೀ.) | 700.00 | 7.00 | 70000 | 12 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 6. | ನಾಗವಾರ-ಯಲಹಂಕ ರಸ್ತೆ ಅಭಿವೃದ್ಧಿ (ಜಕ್ಕೂರು ಮಾರ್ಗವಾಗಿ) | 950.00 | 9.50 | 95000 | 12 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |
| 7. | ಬೆಂಗಳೂರು-ಹೆಣ್ಣೂರು-ಕಣ್ಣೂರು ರಸ್ತೆ ಅಭಿವೃದ್ಧಿ | 940.00 | 9.40 | 94000 | 12 ತಿಂಗಳು | ಒಂದನೇ ದರ್ಜೆ | ಒಂದನೇ ಕರೆ |

ನಿಬಂಧನೆಗಳು:

1. ಗುತ್ತಿಗೆದಾರರು ಕೆಳಕಂಡ ಯಂತ್ರೋಪಕರಣಗಳಿಗೆ ಸಂಬಂಧಿಸಿದಂತೆ ಎಂ.ಓ.ಆರ್.ಟಿ. ಅಂಡ್ ಹೆಚ್. ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ 40:60 ಟಿ.ಪಿ.ಹೆಚ್. ಸಾಮರ್ಥದ ಹಾಟ್ ಮಿಕ್ಸ್ ಪ್ಲ್ಯಾಂಟ್ ಮತ್ತು ಪೇವರ್ ಫಿನೀಷರನ್‌ನ ಮಾಲಿಕತ್ವ, ಲೀಜ್; ಬಾಡಿಗೆಗೆ ಹೊಂದಿರುವ ಬಗ್ಗೆ ಪುರಾವೆಗಳನ್ನು ಒದಗಿಸತಕ್ಕದ್ದು.
2. ಗುತ್ತಿಗೆದಾರರು ಕ್ರಮಸಂಖ್ಯೆ 4ರ ಯಂತ್ರೋಪಕರಣಗಳಿಗೆ ಮಾಲಿಕತ್ವ ಹೊಂದಿರುವ ಬಗ್ಗೆ ದಾಖಲಾತಿಗಳನ್ನು ಒದಗಿಸತಕ್ಕದ್ದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳ ವಿವರ | ಬೇಕಾದ ಸಂಖ್ಯೆ | ಮಾಲಿಕತ್ವದ ಪುರಾವೆಗಳು |
|---|---|---|---|
| 1. | 40:60 ಟಿಪಿಹೆಚ್ ಸಾಮರ್ಥದ ಹಾಟ್ ಮಿಕ್ಸ್‌ಪ್ಲ್ಯಾಂಟ್ | 1 | ಖರೀದಿಸಿದ ಇನ್ವಾಯ್ಸ್; ಬಿಲ್ ಅಥವಾ ರಿಜಿಸ್ಟಾರ್ಡ್ ಸೇಲ್‌ಡೀಡ್, ಲೀಜ್: ಬಾಡಿಗೆ ಕರಾರು ಅಥವಾ ಬಾಡಿಗೆಗೆ ಪಡೆದಿರುವ ಬಗ್ಗೆ ಮಾಲಿಕರ ಒಪ್ಪಿಗೆ ಪತ್ರದೊಂದಿಗೆ ಮಾಲಿಕತ್ವದ ದಾಖಲಾತಿಗಳು. |
| 2. | ಪೇವರ್ ಫಿನಿಷರ್ | 1 | |
| 3. | ವೈಬ್ರೇಟರಿ ರೋಡ್ ರೋಲರ್ | 1 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 4. | ಸ್ಟಾಟಿಕ್ ರೋಡ್‌ರೋಲರ್ | 2 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 5. | ಕಾಂಕ್ರೀಟ್ ಮಿಕ್ಸರ್ಸ್ | 2 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 6. | ವೈಬ್ರೇಟರ್‌ಗಳು | 4 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 7. | ಟಿಪ್ಪರ್‌ಗಳು | 6 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಮಾಲಿಕತ್ವ ದೃಢೀಕರಣ ಪತ್ರ ಪಡೆದು ಸಲ್ಲಿಸಬೇಕು. |
| 8. | ವೆಹಿಕಲ್ ಮೌಂಟೆಂಡ್ ಬಿಟುಮಿನಸ್ ಮೆಕ್ಯಾನಿಕಲ್ ಸ್ಪ್ರೇಯರ್ | 1 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 9. | 40:60 ಟಿಪಿಹೆಚ್ ಸಾಮರ್ಥ್ಯದ ವೆಟ್ ಮಿಕ್ಸ್‌ಪ್ಲ್ಯಾಂಟ್ | 1 | ಇನ್ವಾಯ್ಸ್‌ಬಿಲ್ ಅಥವಾ ರಿಜಿಸ್ಟರ್ಡ್ ಸೇಲ್‌ಡೀಡ್ |

3. ಕಾಮಗಾರಿಗೆ ಸಂಬಂಧಪಟ್ಟಂತೆ ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಇದೇ ರೀತಿಯ ರಸ್ತೆ ಅಭಿವೃದ್ಧಿ ಕೆಲಸವನ್ನು ಈಗ ಟೆಂಡರ್‌ಗಿಟ್ಟಿರುವ ಮೊತ್ತದ ಕನಿಷ್ಠ ಶೇಕಡಾ 30ರಷ್ಟು ಮೊತ್ತದ ಕಾಮಗಾರಿಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುವ ಬಗ್ಗೆ ಪರ್ಯಾಯವಾಗಿ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಅಪೇಕ್ಷಿತ ಕಾಮಗಾರಿಯ ಮೊತ್ತದ ಶೇಕಡಾ 30ರಷ್ಟು ಇದೇ ರೀತಿಯ ಕಾಮಗಾರಿಯನ್ನು ನಿರ್ವಹಿಸಿ ಬಿಲ್ಲಾಗಿರುವುದರ ಬಗ್ಗೆ ಮೂಲ ದೃಢೀಕರಣ ಪತ್ರವನ್ನು ಸಂಬಂಧಿಸಿದ ಕಾರ್ಯಪಾಲಕ ಇಂಜಿನಿಯರ್‌ರವರಿಂದ: ಸಕ್ಷಮ ಪ್ರಾಧಿಕಾರದಿಂದ ದಾಖಲಾತಿ ಪಡೆದು ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಬೇಕು. ತಾಂತ್ರಿಕ ಬಿಡ್‌ನಲ್ಲಿ ಪ್ರತಿಯೊಂದು ನಮೂನೆಯನ್ನು ಭರ್ತಿ ಮಾಡಿ ಪ್ರತಿ ಪುಟದಲ್ಲಿಯೂ ಗುತ್ತಿಗೆದಾರರು ಸಹಿ ಮಾಡಬೇಕು. ಗುತ್ತಿಗೆದಾರರು ಆರ್ಥಿಕ ವರ್ಷವಾರು ಪೂರ್ಣಗೊಳಿಸಿದ ಕಾಮಗಾರಿಗಳ ವಿವರಗಳನ್ನು (ಆರ್ಥಿಕ ಮತ್ತು ಭೌತಿಕ) ತಾಂತ್ರಿಕ ಬಿಡ್‌ನಲ್ಲಿ ಸಲ್ಲಿಸತಕ್ಕದ್ದು.
4. ಗುತ್ತಿಗೆದಾರರು ಟೆಂಡರ್ ಫಾರಂಗಳ ಬೆಲೆಯನ್ನು ಕಾರ್ಯಪಾಲಕ ಇಂಜಿನಿಯರ್ ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಡಿ.ಡಿ. ಅಥವಾ ನಗದು ರೂಪದಲ್ಲಿ ಅರ್ಜಿಯ ಜೊತೆ ಪಾವತಿ ಮಾಡಬೇಕು. ಅರ್ಜಿಯ ಜೊತೆಯಲ್ಲಿ ಗುತ್ತಿಗೆದಾರರು ನೊಂದಣಿ ಪುಸ್ತಕದ ಕಾಮಗಾರಿಯ ವಿವರಗಳೊಂದಿಗೆ ದಾಖಲಿಸಿ ಪ್ರತಿಯನ್ನು ಹಾಗೂ ಇತ್ತೀಚಿನ ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ತಪ್ಪಿದ್ದಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
5. ಇ.ಎಂ.ಡಿ. ಮೊತ್ತವನ್ನು ಷೆಡ್ಯೂಲ್ ರಾಷ್ಟ್ರೀಕೃತ ಬ್ಯಾಂಕ್‌ಗಳ ಎಫ್.ಡಿ.ಆರ್. ಡಿ.ಡಿ., ಎನ್.ಎಸ್.ಸಿ. (ಕಾರ್ಯಪಾಲಕ ಇಂಜಿನಿಯರ್ ಇವರ ಹೆಸರಿಗೆ ಪ್ಲೆಡ್ಜ್ ಮಾಡಬೇಕು) ಬ್ಯಾಂಕರ್ಸ್ ಗ್ಯಾರಂಟಿ ಇತ್ಯಾದಿಗಳ ಬ್ಯಾಂಕರ್ಸ್ ಚೆಕ್ ರೂಪದಲ್ಲಿ ಕಾರ್ಯಪಾಲಕ ಇಂಜಿನಿಯರ್ ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಸಲ್ಲಿಸಬೇಕು.
6. ತಾಂತ್ರಿಕ ಬಿಡ್‌ನ ಎಲ್ಲಾ ದಾಖಲಾತಿಗಳನ್ನು ನೋಟರಿಯವರಿಂದ ಪ್ರಮಾಣೀಕರಿಸಿ ಅಥವಾ ಕಾರ್ಯಪಾಲಕ ಇಂಜಿನಿಯರ್‌ರವರಿಗಿಂತ ಮೇಲ್ಪಟ್ಟ ಅಧಿಕಾರಿಯವರಿಂದ ಪ್ರಮಾಣೀಕರಿಸಿ ಲಗತ್ತಿಸಬೇಕು. ಟೆಂಡರ್ ತೆರೆಯುವ ದಿನ ಗುತ್ತಿಗೆದಾರರ ಮೂಲ ದಾಖಲೆಗಳನ್ನು ಪರಿಶೀಲನೆಗೆ ಸಲ್ಲಿಸಬೇಕು. ತಪ್ಪಿದ್ದಲ್ಲಿ ಟೆಂಡರನ್ನು ಅನರ್ಹಗೊಳಿಸಲಾಗುವುದು.
7. ಜಾಯಿಂಟ್ ವೆಂಚರ್‌ನಲ್ಲಿನ ಪಾಲುದಾರರು: ಸದಸ್ಯರುಗಳು ಪ್ರತ್ಯೇಕವಾಗಿ ಟೆಂಡರು ಸಲ್ಲಿಸುವಾಗ ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿ ನಿರ್ವಹಿಸಿದ ಕಾಮಗಾರಿಗಳ ಬಗ್ಗೆ ದೃಢೀಕರಣ ಮತ್ತು ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿರುವ ಯಂತ್ರೋಪಕರಣಗಳ ಮಾಲಿಕತ್ವವನ್ನು ಪರಿಗಣಿಸಲಾಗುವುದಿಲ್ಲ.
8. ನಿಬಂಧನೆಗೊಳಪಟ್ಟ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
9. ಆರ್ಥಿಕ ಬಿಡ್‌ನ ಷೆಡ್ಯೂಲ್ ಬಿಲ್‌ನಲ್ಲಿ ಐಟಂವಾರು ದರಗಳನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸಬೇಕು.
10. ಯಾವುದೇ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಕ್ಷಮ ಪ್ರಾಧಿಕಾರಕ್ಕೆ ಇರುತ್ತದೆ.
11. ಹೆಚ್ಚಿನ ಮಾಹಿತಿಗಳನ್ನು ಕೆಳಗೆ ಸಹಿ ಮಾಡಿರುವವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

12. ಯಶಸ್ವಿ ಗುತ್ತಿಗೆದಾರರು ಕಾರ್ಯಾದೇಶ ನೀಡಿದ 30 ದಿನಗಳೊಳಗೆ ಕಡ್ಡಾಯವಾಗಿ ಕಾಮಗಾರಿಯ ಸ್ಥಳದಿಂದ 50 ಕಿ.ಮೀ. ಒಳಗೆ ನಿಗದಿತ ಸಾಮರ್ಥ್ಯದ ಹಾಟ್‌ಮಿಕ್ಸ್ ಪ್ಲಾಂಟ್ ಅನ್ನು ಸ್ವಂತ ಜವಾಬ್ದಾರಿಯ ಮೇಲೆ ಸ್ಥಾಪಿಸಬೇಕು ಹಾಗೂ ಸೂಚಿನಕ್ಷೆಯಲ್ಲಿ ಹಾಟ್‌ಮಿಕ್ಸ್ ಸ್ಥಳವನ್ನು ನಕ್ಷೆಯಲ್ಲಿ ಗುರುತಿಸಿ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಲ್ಲಿಸಬೇಕು.

13. ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಮೊತ್ತಕ್ಕೆ ಷೆಡ್ಯೂಲ್: ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಲೈನ್ ಆಫ್ ಕ್ರೆಡಿಟ್ ಅನ್ನು ನಿಗದಿತ ನಮೂನೆ-ಕೆ ರಲ್ಲಿ ಸಂಬಂಧಿಸಿದ ಕಾಮಗಾರಿಯ ಹೆಸರಿನೊಂದಿಗೆ ಭರ್ತಿ ಮಾಡಿ ನಿಗದಿತ ನಮೂನೆಯಲ್ಲಿ ತಾಂತ್ರಿಕ ಬಿಡ್‌ನೊಂದಿಗೆ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.

14. ಈ ಕಾಮಗಾರಿಗಳ ಗುಣಮಟ್ಟವನ್ನು ಕಾಯ್ದುಕೊಂಡು, ಕಾಮಗಾರಿ ಪೂರ್ಣಗೊಂಡ ನಂತರ ಮೂರು ವರ್ಷಗಳವರೆಗೆ ರಸ್ತೆ ನಿರ್ವಹಣೆಯನ್ನು ಗುತ್ತಿಗೆದಾರರ ವೆಚ್ಚದಲ್ಲಿಯೇ ನಿರ್ವಹಿಸಬೇಕು ಎಂಬ ನಿಬಂಧನೆಯೊಂದಿಗೆ ಅನುಷ್ಠಾನಗೊಳಿಸಬೇಕು. ಈ ಸಂಬಂಧವಾಗಿ ಬಿಲ್ಲುಗಳಲ್ಲಿ ಶೇ.3 ರಂತೆ ಇಡಿಗಂಟು ಮೊತ್ತವನ್ನು ಎಫ್‌ಎಸ್‌ಡಿ ಯ ಜೊತೆ ಕಟಾಯಿಸಿ ಕೊಳ್ಳಲಾಗುವುದು ಮತ್ತು ಪ್ರತಿ ನಿರ್ವಹಣ ವರ್ಷ ಪೂರ್ಣಗೊಂಡ ನಂತರ ಶೇ.1 ರಂತೆ ಬಿಡುಗಡೆಗೊಳಿಸಲಾಗುವುದು.

15. ಕಾಮಗಾರಿಗಳಿಗೆ ಅವಶ್ಯವಿರುವ ಸಾಮಗ್ರಿಗಳಾದ ಬಿಟುಮನ್ ಉಕ್ಕು ಮತ್ತು ಸಿಮೆಂಟನ್ನು ಗುತ್ತಿಗೆದಾರರೇ ಸರಬರಾಜು ಮಾಡಿಕೊಂಡು ಗುಣನಿಯಂತ್ರಣ ಅಧಿಕಾರಿಗಳಿಂದ ಗುಣಮಟ್ಟದ ಬಗ್ಗೆ ದೃಢೀಕರಣ ಪತ್ರ ಪಡೆಯಬೇಕು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಸರಬರಾಜು ಮಾಡುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,
ಪಿ.ಆರ್.477 ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು.

**WATER RESOURCES (MINOR IRRIGATION) DEPARTMENT**
**OFFICE OF THE EXECUTIVE ENGINEER, MINOR IRRIGATION DIVISION, MANGALORE**
**TIME EXTENSION AND CORRIGENDUM**
**No. MID/ MNG/E/ TENDER-II/ 2005-06/2171/ Dated:5th August, 2005**

**Sub:** Construction of Salt Water Exclusion Dam across Vandse river in Kattebelthur village of Kundapur taluk of Udupi District.

**Ref:** 1. This Office Tender Notification No. MID/MNG/ Tender 11/05-06/1915/16.07.2005.

The Tender invited under above reference for construction of Salt Water Exclusion Dam across Vandse river in Kattebelthur village of Kundapur taluk is notified with the following time extension along with corrigendum as below.

| Sl. No. | As per Notification | Now to read as |
|---|---|---|
| 1. | Short Term tender Notification | Tender Notification |
| 2. | Completed tender will be received in the office of the Executive Engineer, M.I.Division, Mangalore upto 4.00 P.M. on 25.08.2005. | Completed tender will be received in the office of the Executive Engineer, M.I.Division, Mangalore upto 4.00 P.M. on 26.09.2005. |
| 3. | Last date of receipt of application 16.08.2005 | Last date of receipt of application 14.09.2005. |
| 4. | Date of issue of tender form 20.08.2005 | Date of issue of tender form 19.09.2005 |
| 5. | Availability (either owned or leased) of the following key and critical equipments for the works. | Availability (owned only) of the following key and critical equipments for the works. |

All other conditions will remain same
Any additional information can be obtained from this office during working hours.

**N.T. RAJGOPAL**
PR-480 Executive Engineer,
M.I. Division, Mangalore.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ**
**ಟೆಂಡರ್ ಪ್ರಕಟಣೆ**
**(ದ್ವಿ ಲಕೋಟೆ ಪದ್ಧತಿಯಲ್ಲಿ)**
**ಪ್ರಕಟಣೆ ಸಂಖ್ಯೆ:03/ 2005-06, ದಿನಾಂಕ:1ನೇ ಆಗಸ್ಟ್, 2005**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗೆ ಐಟಂವಾರು ಟೆಂಡರನ್ನು ದ್ವಿ-ಲಕೋಟೆ ಪದ್ಧತಿಯಲ್ಲಿ, ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-1999, 2000 ಮತ್ತು ಆ್ಯಕ್ಟ್-2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1. ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್-ಬಿ ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಲಕೋಟೆ ಮತ್ತು ಆರ್ಥಿಕ ಬಿಡ್ ಲಕೋಟೆ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರ ಕಾರ್ಯಾಲಯದಲ್ಲಿ, ಈ ಕೆಳಗೆ ಸೂಚಿಸಿರುವ ದಿನಾಂಕದಂದು ಸಾಯಂಕಾಲ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| | | |
|---|---|---|
| 1. | ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: | 01.10.2005ರ ಸಂಜೆ 5.00 ಗಂಟೆಯವರೆಗೆ. |
| 2. | ಖಾಲಿ ಟೆಂಡರ್-ಫಾರಂಗಳನ್ನು ಕೊಡುವ ದಿನಾಂಕ: | 15.10.2005ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. |
| 3. | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ: (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ) | 26.10.2005ರ ಸಂಜೆ 4.00 ಗಂಟೆಯೊಳಗೆ ಸಲ್ಲಿಸುವುದು. |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ಹಿಂದಿರುಗಿಸಲಾರದಂಥದ್ದು) (ತೆರಿಗೆ ಸೇರಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ (ಮಳೆಗಾಲ ಸೇರಿ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಹೊಳಲೂರು ಬಳಿ ತುಂಗಾ ಭದ್ರ ನದಿಯಿಂದ ನೀರನ್ನು ಎತ್ತಿ ನಾರಾಯಣ ಕೆರೆ, ಸೀಗೆಹಳ್ಳಿ ಕೆರೆ, ಬೂದಿಗೆರೆ ಕೆರೆ, ಸುತ್ತುಕೋಟೆ ಕೆರೆಗಳಿಗೆ ನೀರುಣಿಸಲು ಏತ ನೀರಾವರಿ ಯೋಜನೆಯ ಸಿವಿಲ್ ಕಾಮಗಾರಿ ನಿರ್ಮಾಣ (ನಬಾರ್ಡ್ ಅಡಿಯಲ್ಲಿ) | 460.00 | 4,60,000.00 | 15,000.00 | ಒಂದನೇ ದರ್ಜೆ | 15 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಪಡೆಯುವ ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲಿಸಿಕೊಂಡು ಅರ್ಜಿಯೊಂದಿಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
4. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳನ್ನು ಹೊಂದಿರಬೇಕು.

**ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್‌ನ ಚೆಕ್ಕನ್ನು ಕಾರ್ಯಪಾಲಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಯಾವುದೇ ಶೆಡ್ಯೂಲ್ ಬ್ಯಾಂಕ್‌ನಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**ಇ.ಎಂ.ಡಿ. ಸಲ್ಲಿಸುವ ವಿಧಾನ:**

ನಿಗದಿತ ಇ.ಎಂ.ಡಿ. ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ./ ಪೇ ಆರ್ಡರ್/ ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಬಹುದು. ಎನ್.ಎಸ್.ಸಿ.ಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಎನ್.ಎಸ್.ಸಿ.ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು. ಹಾಗೂ ಇ.ಎಂ.ಡಿ. ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿಡಿ/ ಪೇ ಆರ್ಡರ್/ ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಿದರೆ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದು, ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ. ಯನ್ನು ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಮಾನ್ಯತೆ ಹೊಂದಿರಬೇಕು.

**ತಾಂತ್ರಿಕ (ಟೆಕ್ನಿಕಲ್) ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:**

1. ಇ.ಎಂ.ಡಿ.
2. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳ ವಿವರಗಳು.
3. ತಾಂತ್ರಿಕ ಬಿಡ್‌ನಲ್ಲಿರುವ ನಮೂನೆ (1) ರಿಂದ (8) ಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ದೃಢೀಕರಿಸಬೇಕು.

**ಆರ್ಥಿಕ ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:**

1. ಶೆಡ್ಯೂಲ್-ಬಿ ಯನ್ನು ದ್ವಿ ಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಮೊತ್ತವನ್ನು ನಮೂದಿಸಿ, ತಿದ್ದುಪಡಿ ಮಾಡಿರುವುದನ್ನು ಸಹಿಯೊಂದಿಗೆ ದೃಢೀಕರಿಸಬೇಕು.
2. ಪಿ.ಡಬ್ಲ್ಯೂ.ಜಿ.-65 ಮತ್ತು 66 ಇವುಗಳನ್ನು ಹಾಗೂ ಇದರ ಅಡಕಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ಸಹಿ ಮಾಡಿರಬೇಕು.

**ಷರತ್ತುಗಳು:**

1) ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೋಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.

2) ಟೆಂಡರ್ ಪಡೆಯಲು ಅರ್ಹತೆಯಾಗಿ ಪ್ರತಿಯೊಬ್ಬ ಗುತ್ತಿಗೆದಾರನು ಕಳೆದ ಐದು ವರ್ಷಗಳಲ್ಲಿ.

ಅ. ಕನಿಷ್ಟ ಎರಡು ಆರ್ಥಿಕ ವರ್ಷಗಳಲ್ಲಿ ರೂ.736.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ತರಹದ ಸಿವಿಲ್ ಕಾಮಗಾರಿಗಳ ನಿರ್ಮಾಣ) ವಾರ್ಷಿಕ ವಹಿವಾಟು ಮಾಡಿರಬೇಕು.

ಆ. ಪ್ರಮುಖ ಗುತ್ತಿಗೆದಾರನಾಗಿ ಇದೇತರಹನಾದ ರೂ.230.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಕನಿಷ್ಟ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಮುಗಿಸಿರಬೇಕು.

ಇ. ಯಾವುದೇ ಒಂದು ವರ್ಷದಲ್ಲಿ ಈ ಕೆಳಗೆ ಕಾಣಿಸಿದ ಕನಿಷ್ಟ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| 1. | ಅಗೆತದ ಕೆಲಸ | 20000 ಘ.ಮೀ. |
| 2. | ಮಣ್ಣಿನ ಒಡ್ಡು | 10000 ಘ.ಮೀ. |
| 3. | ಸರಳುಸಹಿತ ಮತ್ತು ಸರಳುರಹಿತ ಕಾಂಕ್ರೀಟ್ ಕೆಲಸ | 500 ಘ.ಮೀ. |
| 4. | ರೈಸಿಂಗ್ ಮೈನ್ ಕಾಮಗಾರಿ ಪಿ.ಎಸ್.ಸಿ. ಪೈಪುಗಳನ್ನು ಒಳಗೊಂಡಂತೆ | 6000 ಮೀ. |
| 5. | ರಿವಿಟ್‌ಮೆಂಟ್ ಕಾಮಗಾರಿ | 1000 ಘ.ಮೀ. |
| 6. | ಕಲ್ಲು ಕಟ್ಟಡ ಕಾಮಗಾರಿ | 500 ಘ.ಮೀ. |

3) ಅರ್ಜಿದಾರರು ಪ್ರದರ್ಶಿಸುವುದು.

ಅ) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು. (ಸ್ವಂತ ಅಥವಾ ಲೀಸ್ ಮೇಲೆ) ಲೀಸ್ ಆಗಿದ್ದಲ್ಲಿ ಜಿ.ಪಿ.ಎ. ಹಾಗೂ ಮೂಲ ದಾಖಲಾತಿ ಒದಗಿಸುವುದು.

| | | |
|---|---|---|
| i. | ಎಕ್ಸ್‌ಕ್ಯವೇಟರ್/ ಪೋಕ್ಲೇನ್ (0.90 ಘಮೀ ಸಾಮರ್ಥ್ಯ) | 2 ನಂ. |
| j. | ಲಾರಿಗಳು/ ಟಿಪ್ಪರ್‌ಗಳು | 4 ನಂ. |
| k. | ಕಂಪ್ರೆಸ್ಸರ್/ ವ್ಯಾಗನ್ ಡ್ರಿಲ್ಲರ್ | 2 ನಂ. |
| l. | ಕಾಂಕ್ರೀಟ್ ಮೆಶಿನ್ ಮಿಕ್ಸರ್ (10/7 ಘ.ಫೀಟ್ ಸಾಮರ್ಥ್ಯ) | 3 ನಂ. |
| m. | ವೈಬ್ರೇಟರ್ | 6 ನಂ. |
| n. | ಪಂಪ್‌ಸೆಟ್ (5 ಹೆಚ್.ಪಿ.) | 4 ನಂ. |
| o. | ಪಂಪ್‌ಸೆಟ್ (10 ಹೆಚ್.ಪಿ.) | 4 ನಂ. |
| p. | ಸೆಂಟ್ರಿಂಗ್ ಸಾಮಗ್ರಿಗಳು (ಕಾಂಕ್ರೀಟ್ ಕೆಲಸಕ್ಕೆ) | 100 ಘ.ಮೀ. ಪ್ರತಿದಿನಕ್ಕೆ |
| q. | ಟ್ರೈಪಾಡ್ ನೊಂದಿಗೆ ಇರುವ ಕ್ರೇನ್ | 3 ನಂ. |

ಆ) 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಯೋಜನೆ ನಿರ್ಮಾಣದ ಅನುಭವವುಳ್ಳ ಒಬ್ಬ ಪ್ರಾಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರನ್ನು ಹೊಂದಿರಬೇಕು.

ಇ) ಈ ಯೋಜನೆಗೆ ಬೇಕಾದ ಸಂಪನ್ಮೂಲ ಚರಾಸ್ತಿ ಮತ್ತು / ಅಥವಾ ಬ್ಯಾಂಕ್ ಕ್ರೆಡಿಟ್, ರೂಪದಲ್ಲಿ ಕನಿಷ್ಟ ರೂ.250 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು.).

4. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಐ.ಎಸ್.ಐ. ಸ್ಟಾಂಡರ್ಡ್ ಸಾಮಗ್ರಿಗಳನ್ನು ಖರೀದಿಸಬೇಕು. ಸಾಮಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣ ನಿಯಂತ್ರಣ ಪ್ರಾಧಿಕಾರದವರಿಂದ ಪರೀಕ್ಷೆ ಮಾಡಿಸಿ, ಗುಣಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.
5. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.
6. ಸತತವಾಗಿ 3 ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
7. ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
8. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

9. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೊಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
10. ರಾಜ್ಯ ಮಾರಾಟ ತೆರಿಗೆಯಲ್ಲಿ ನೊಂದಣಿ ಸೂಚಿಸಿರುವ ಬಗ್ಗೆ ನೊಂದಣಿ ಪತ್ರದ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು, ಅರ್ಜಿಯೊಂದಿಗೆ ಲಗತ್ತಿಸಬೇಕು.
11. ಷರತ್ತುಗಳನ್ನೊಳಗೊಂಡ ಟೆಂಡರನ್ನು ಪರಿಗಣಿಸುವುದಿಲ್ಲ.
12. ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ ಶಿವಮೊಗ್ಗ ರವರ ಕಛೇರಿಯ ನೋಟಿಸ್ ಫಲಕದಲ್ಲಿ ಪ್ರಕಟಿಸಲಾಗುವುದು/ ತಿಳಿಸಲಾಗುವುದು.
13. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
14. ತಾಂತ್ರಿಕ ಬಿಡ್‌ನಲ್ಲಿ ವಿವರಗಳು ನಮೂದಿಸಲು ಸ್ಥಳವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಕಾರ್ಯಪಾಲಕ ಇಂಜಿನಿಯರ್,
ಸಣ್ಣನೀರಾವರಿ ವಿಭಾಗ, ಶಿವಮೊಗ್ಗ.

ಪಿ.ಆರ್.481

## ಕಾರ್ಯಪಾಲಕ ಅಭಿಯಂತರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಕಾನಿಅ/ರಾಹೆವಿ/ ಚಿ/ ಸ್ಇ-2/ ರಸ್ತೆ ಬದಿ ಮರ ಹರಾಜು/ ಕಿ.ಮೀ. 430-440, ದಿನಾಂಕ: 20ನೇ ಆಗಸ್ಟ್, 2005**

**2005-06/2054**

**ವಿಷಯ:** ರಾಷ್ಟ್ರೀಯ ಹೆದ್ದಾರಿ- 13ರ ಕಿ.ಮೀ 430 ರಿಂದ 440 ರಲ್ಲಿ ರಾಷ್ಟ್ರೀಯ ಹೆದ್ದಾರಿ ಅಗಲೀಕರಣಕ್ಕೆ ಅಡ್ಡ ಬರುವ ವಿವಿಧ ಜಾತಿಯ ಮರಗಳನ್ನು ವಿಲೇ ಮಾಡಿಕೊಳ್ಳುವ ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ-13ರ ಕಿ.ಮೀ. 430 ರಿಂದ 440 ರವರೆಗೆ ರಸ್ತೆ ಅಗಲೀಕರಣಕ್ಕೆ ಸಂಬಂಧಿಸಿದಂತೆ ಕಿ.ಮೀ. 430 ರಿಂದ 440 ರವರೆಗಿನ ರಸ್ತೆಯ ಅಗಲೀಕರಣದೊಳಗೆ ಬರುವ ಬೆಳೆದು ನಿಂತಿರುವ ವಿವಿಧ ಜಾತಿಯ ಮರಗಳನ್ನು ವಿಲೇವಾರಿ ಮಾಡಲು ದಿನಾಂಕ: 28.09.2005 ರಂದು ರಾಷ್ಟ್ರೀಯ ಹೆದ್ದಾರಿ ವಿಭಾಗ ಚಿತ್ರದುರ್ಗ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮಾಡಲು ದಿನಾಂಕವನ್ನು ನಿಗದಿಪಡಿಸಲಾಗಿದೆ.

ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಾಗಲಿ ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಈ ಕೆಳಗೆ ನಮೂದಿಸಿರುವ ಷರತ್ತಿಗೊಳಪಟ್ಟು ಬಹಿರಂಗ ಹರಾಜು ನಡೆಸಲಾಗುವುದು. ಇಚ್ಛೆಯುಳ್ಳವರು ಈ ಹರಾಜಿನಲ್ಲಿ ಭಾಗವಹಿಸುವುದು. ಸದರಿ ಬಹಿರಂಗ ಹರಾಜನ್ನು ಅನುಸೂಚಿಯಲ್ಲಿ ನಮೂದಿಸಿರುವ ಸ್ಥಳದಲ್ಲಿ ಮೇಲ್ಕಂಡ ದಿನಾಂಕದಂದು ನಡೆಸಲಾಗುವುದು.

ದಿನಾಂಕ: 28.09.2005ರಂದು ರಾಷ್ಟ್ರೀಯ ಹೆದ್ದಾರಿ ವಿಭಾಗ ಚಿತ್ರದುರ್ಗ ಕಛೇರಿಯ ಆವರಣದಲ್ಲಿ ನಡೆಸುವ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಭಾಗವಹಿಸದೆ ಇದ್ದಲ್ಲಿ ಅಥವಾ ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ: 06.10.2005ರಂದು ನಡೆಸಲಾಗುವುದು. ನಂತರದ ಎರಡನೆಯ ಮರು ಹರಾಜನ್ನು ದಿನಾಂಕ: 14.10.2005ರಂದು ನಡೆಸಲಾಗುವುದು. ಈ ಹರಾಜುಗಳಿಗಾಗಿ ಪುನಃ ಯಾವುದೇ ರೀತಿಯ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**ಅನುಸೂಚಿ**

| ರಸ್ತೆಯ ಹೆಸರು | ಯುನಿಟ್ ಸಂಖ್ಯೆ | ಕಿ.ಮೀ. | ಮರಗಳ ಸಂಖ್ಯೆ | | | ಅಂದಾಜು ಉತ್ಪನ್ನ ಪ್ರಮಾಣ | | ಬಹಿರಂಗ ಹರಾಜು ಮಾಡುವ ಸ್ಥಳ/ ವೇಳೆ |
|---|---|---|---|---|---|---|---|---|
| | | | ಎಡಗಡೆ | ಬಲಗಡೆ | ಒಟ್ಟು | ಟಿಂಬರ್ (ಕ್ಯೂ.ಮೀ) | ಉರುವಲು (ಟನ್) | |
| ರಾಷ್ಟ್ರೀಯ ಹೆದ್ದಾರಿ-13 ಸೊಲ್ಲಾಪುರ ಮಂಗಳೂರು ಸೆಕ್ಷನ್ | 1 | 430 ರಿಂದ 431 | 30 | 29 | 59 | - | 107.40 | ರಾಷ್ಟ್ರೀಯ ಹೆದ್ದಾರಿ ವಿಭಾಗ ಕಛೇರಿ, ಚಿತ್ರದುರ್ಗ, ಬೆಳಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು. |
| | 2 | 431 ರಿಂದ 432 | 42 | 39 | 81 | 8.81 | 154.90 | |
| | 3 | 432 ರಿಂದ 433 | 29 | 26 | 55 | 7.49 | 98.00 | |
| | 4 | 433 ರಿಂದ 434 | 8 | 4 | 12 | - | 35.50 | |
| | 5 | 434 ರಿಂದ 435 | 3 | 6 | 9 | - | 23.00 | |
| | 6 | 435 ರಿಂದ 436 | 9 | 5 | 14 | - | 33.00 | |
| | 7 | 436 ರಿಂದ 437 | 2 | - | 2 | - | 2.00 | |
| | 8 | 438 ರಿಂದ 439 | 10 | 22 | 32 | 2.75 | 50.50 | |
| | 9 | 439 ರಿಂದ 440 | 25 | 7 | 32 | 12.85 | 85.50 | |
| | | | | | **296** | **31.90** | **589.80** | |

**ಷರತ್ತುಗಳು:**

1) ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ರೂ. 5000/- ಗಳ ಇ.ಎಂ.ಡಿ. ಮೊತ್ತವನ್ನು ಠೇವಣಿಯಾಗಿಡತಕ್ಕದ್ದು.

2) ಹರಾಜುದಾರರು ಬಹಿರಂಗ ಹರಾಜಿನ ಷರತ್ತುಗಳನ್ನು ಒಪ್ಪಿಕೊಂಡು ಸವಿಸ್ತಾರ ಬಹಿರಂಗ ಹರಾಜು ಪ್ರಕಟಣೆಯಲ್ಲಿ ಸಹಿ ಹಾಕದ ಹೊರತು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. ಸದರಿ ಹರಾಜಿನಲ್ಲಿ ಸಂಘ, ಸಂಸ್ಥೆಯವರು ಸಹ ಭಾಗವಹಿಸಬಹುದಾಗಿರುತ್ತದೆ.

3) ಯಶಸ್ವಿ ಬಿಡ್‌ದಾರರು ಇಟ್ಟ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಆ ದಿನವೇ ಹಿಂತಿರುಗಿಸಿಕೊಡಲಾಗುವುದು.

4) ಮರಗಳನ್ನು ಹರಾಜಿಗೆ ಇಟ್ಟಿರುವ ಪರಿಮಾಣವು ಹೆಚ್ಚು ಕಡಿಮೆ ವ್ಯತ್ಯಾಸವಾಗಬಹುದು. ಅಂತಹುದಕ್ಕೆ ಯಾವುದೇ ರೀತಿಯ ದೂರುಗಳನ್ನು ಮಾನ್ಯ ಮಾಡುವುದಿಲ್ಲ.

5) ಯಶಸ್ವಿ ಬಿಡ್‌ದಾರರು ಬಿಡ್ ಮುಗಿದ ತಕ್ಷಣ ಖರೀದಿಸಿದ ಯುನಿಟ್‌ಗಳ ಮೊತ್ತದ ಶೇಕಡ 50ರಷ್ಟು ಹಣ ಹಾಗೂ ಪೂರ್ಣ ತೆರಿಗೆಗಳನ್ನು (ಅಂದರೆ ಬಿಡ್ ಮೊತ್ತದ ಮೇಲೆ ಶೇಕಡ 8ರ ಅರಣ್ಯಾಭಿವೃದ್ಧಿ ತೆರಿಗೆ+ಶೇಕಡ 12.50ರ ವ್ಯಾಟ್+ಸೆಕ್ಷನ್ 206(ಸಿ) ಪ್ರಕಾರ ವರಮಾನ ತೆರಿಗೆ) ಅದೇ ದಿನ ಪಾವತಿಸಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಜುದಾರರ ಜವಾಬ್ದಾರಿ ಮೇಲೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಮೊದಲನೇ ಬಿಡ್‌ಗಿಂತ ಹಣ ಕಡಿಮೆ ಬಂದಲ್ಲಿ ಕಡಿಮೆಯಾದ ಹಣವನ್ನು ತಪ್ಪಿತಸ್ಥರಾದ ಮೊದಲನೇ ಯಶಸ್ವಿ ಬಿಡ್‌ದಾರರಿಂದ ಬಾಕಿ ಭೂಕಂದಾಯ ರೂಪದಲ್ಲಿ ಸೆಕ್ಷನ್-109ರ ಪ್ರಕಾರ ವಸೂಲಿ ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಹೆಚ್ಚಿಗೆ ಹಣ ಬಂದಲ್ಲಿ ಮೊದಲನೇ ಯಶಸ್ವಿ ಬಿಡ್‌ದಾರರಿಗೆ ಈ ಹೆಚ್ಚಿಗೆ ಬಂದ ಹಣವನ್ನು ಕೇಳುವ ಅಧಿಕಾರವಿರುವುದಿಲ್ಲ.

6) ಯಶಸ್ವಿ ಬಿಡ್‌ದಾರರು ಬಹಿರಂಗ ಹರಾಜಿನ ದಿನವೇ ಹರಾಜು ಬೆಲೆಯ ಮೊತ್ತದಲ್ಲಿ ಶೇಕಡ 50ರಷ್ಟನ್ನು ಮತ್ತು ಪೂರ್ಣ ತೆರಿಗೆಗಳನ್ನು ಪಾವತಿ ಮಾಡಿದ ನಂತರ ಉಳಿದ ಶೇಕಡ 50ರಷ್ಟು ಮೊತ್ತವನ್ನು ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶವನ್ನು ಪಡೆಯುವ ಮೊದಲು ಪಾವತಿಸತಕ್ಕದ್ದು.

7) ವರಮಾನ ತೆರಿಗೆಯನ್ನು ತೆರಿಗೆ ಸೆಕ್ಷನ್-206(ಸಿ) ಪ್ರಕಾರ ಬಿಡ್ ಮೊತ್ತದ ಮೇಲೆ ಶೇಕಡ 2.50ರ ವರಮಾನ ತೆರಿಗೆಯ ಮೊತ್ತದ ಮೇಲೆ+ಶೇಕಡ 2ರ ಎಜ್ಯುಕೇಶ್ ಸೆಸ್ ವಿಧಿಸಲಾಗುವುದು.

8) ಬಹಿರಂಗ ಹರಾಜಿನಲ್ಲಿ ಖರೀದಿಸಿದ ಮರಗಳನ್ನು ಸ್ವಂತ ಖರ್ಚಿನಿಂದ ನಿಯಮಾನುಸಾರ ಬೇರು/ ಬುಡ ಸಹಿತ ಕಟಾವು ಮಾಡಿಕೊಂಡು ಸಾಗಿಸಿಕೊಳ್ಳುವುದು.

9) ಇಲಾಖೆಯಿಂದ ಪಟ್ಟಿ ಮಾಡಲ್ಪಟ್ಟಿರುವ ಮರಗಳ ಎಣಿಕೆಗಳನ್ನು ಮತ್ತು ವಿಂಗಡಣೆಗಳನ್ನು ಅಖೈರವಾಗಿ ಒಪ್ಪಿಕೊಳ್ಳತಕ್ಕದ್ದು, ಮಾರಾಟ ಮಾಡುವ ಮುನ್ನ ಖರೀದಿಸಲು ಇಷ್ಟಪಡುವವರು ಮರ ಮುಟ್ಟುಗಳ ಅಳತೆ, ಗುಣ, ಪರಿಮಾಣಗಳನ್ನು ಪರಿಶೀಲಿಸಿಕೊಳ್ಳಬಹುದು. ಅನಂತರ ಬರುವ ದೂರುಗಳನ್ನು ಸ್ವೀಕರಿಸುವುದಿಲ್ಲ.

10) ಮರಗಳು ಎಲ್ಲಿ, ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.

11) ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಅಥವಾ ಬಾಕಿದಾರರು ಅಥವಾ ವಯಸ್ಕರಲ್ಲದವರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.

12) ಯಶಸ್ವಿ ಬಿಡ್‌ದಾರರು ಸ್ಥಿರೀಕರಣ ಆದೇಶ ಪಡೆದ ದಿನಾಂಕದಿಂದ ಒಂದು ತಿಂಗಳೊಳಗಾಗಿ ನಿಯಮಾನುಸಾರ ಅರಣ್ಯ ಇಲಾಖಾ ಅನುಮತಿಯನ್ನು ಪಡೆದುಕೊಂಡು ಮರಗಳನ್ನು ಅವರ ಸ್ವಂತ ಖರ್ಚಿನಲ್ಲಿ ಕಟಾವು ಮಾಡಿಕೊಂಡು ಸಾಗಾಣೆ ಮಾಡಿಕೊಳ್ಳತಕ್ಕದ್ದು.

13) ಬಹಿರಂಗ ಹರಾಜಿನ ಸಂಬಂಧ ತಂಟೆ ತಕರಾರು ಏನಾದರೂ ಬಂದಲ್ಲಿ ಅದನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರಿಗೆ ಕಾಯ್ದಿರಿಸಲಾಗಿದೆ.

14) ಯಶಸ್ವಿ ಹರಾಜುದಾರರು ಖರೀದಿಸಲ್ಪಟ್ಟ ಮರಗಳನ್ನು ಕಟಾವು ಮಾಡಿ ಸಾಗಾಣೆ ಮಾಡಿಕೊಳ್ಳದೇ ಹಾಗೆಯೇ ಬಿಟ್ಟು ಅಕ್ರಮ ಕಡಿತಲೆ ಹಾಗೂ ಕಳ್ಳತನವಾದರೆ, ಬೆಂಕಿ ಮತ್ತು ಯಾವುದೇ ಪ್ರಕೃತಿಯಿಂದ ನಷ್ಟವಾದರೆ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.

15) ಯಶಸ್ವಿ ಹರಾಜುದಾರರು ನಿಂತ ಮರಗಳನ್ನು ಕಟಾವಣೆ ಮಾಡುವಾಗ ಸಾರ್ವಜನಿಕ ಸೊತ್ತುಗಳಿಗೆ, ವಿದ್ಯುತ್ ಕಂಬಗಳಿಗೆ, ದೂರವಾಣಿ ಸಂಪರ್ಕಕ್ಕೆ, ವಾಹನ ಸಂಚಾರಕ್ಕೆ ಹಾಗೂ ಪ್ರಯಾಣಿಕರಿಗೆ ತೊಂದರೆಯಾಗದಂತೆ ನೋಡಿಕೊಳ್ಳತಕ್ಕದ್ದು, ಯಾವುದೇ ಅನಾಹುತಗಳು ಸಂಭವಿಸಿದಲ್ಲಿ ಯಶಸ್ವಿ ಹರಾಜುದಾರರೇ ಹೊಣೆಗಾರರಾಗಿರುತ್ತಾರೆ.

16) ಅನಿವಾರ್ಯ ಕಾರಣಗಳಿಂದ ತಡವಾಗಿ ಹರಾಜಿನಲ್ಲಿ ಭಾಗವಹಿಸಲು ಬಂದ ಬಿಡ್‌ದಾರರು ಹರಾಜು ನಡೆಸುವ ಅಧಿಕಾರಿಗಳ ಅನುಮತಿ ಪಡೆದು ಹರಾಜಿನಲ್ಲಿ ಇ.ಎಂ.ಡಿ. ಹಣವನ್ನು ತುಂಬಿ ಭಾಗವಹಿಸಬಹುದು.

17) ಬಹಿರಂಗ ಹರಾಜಿನ ಸಮಯದಲ್ಲಿ ಅವಶ್ಯಕವಾಗಿ ಸೇರಿಸಬೇಕಾದಂತಹ ಯಾವುದೇ ಷರತ್ತುಗಳನ್ನು ಸೇರಿಸಬಹುದು ಮತ್ತು ಯಾವುದೇ ಅವಶ್ಯ ಬದಲಾವಣೆಗಳನ್ನು ಜಾರಿಗೆ ತರಲಾಗುವುದು. ಹರಾಜಿನ ಕಾಲದಲ್ಲಿ ಬದಲಾವಣೆಗಳನ್ನು ಓದಿ ಹೇಳಲಾಗುವುದು.

18) ಸರ್ಕಾರದ ಇತರೆ ಕಾನೂನು ಕಟ್ಟಳೆಗಳಿಗೆ ಬದ್ಧರಾಗಿರತಕ್ಕದ್ದು.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್.483 ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಅಂಚೆ ಪೆಟ್ಟಿಗೆ ಸಂಖ್ಯೆ:7648 ಬೆಂಗಳೂರು-76

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಇ:ಜೀವತ:ಸತೋನಿ:ಹುಮಾ:92:2005-06, ದಿನಾಂಕ:16ನೇ ಆಗಸ್ಟ್, 2005**

ಈ ಮೂಲಕ ಸಾರ್ವಜನಿಕರಿಗೆ ಮತ್ತು ಹಣ್ಣಿನ ವ್ಯಾಪಾರಿಗಳಿಗೆ ತಿಳಿಸುವುದೇನೆಂದರೆ, ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕು ಹುಳಿಮಾವು ತೋಟಗಾರಿಕೆ ಕ್ಷೇತ್ರದಲ್ಲಿ ಬೆಳೆದಿರುವ ಸಪೋಟ ಹಣ್ಣಿನ 2005ನೇ ಸಾಲಿನ ಎರಡನೇ ಅವಧಿಯ ಫಸಲನ್ನು (01.07.2005 ರಿಂದ 31.12.2005) ಅದೇ ಕ್ಷೇತ್ರದಲ್ಲಿ ದಿನಾಂಕ: 13.09.2005 ರಂದು ಬೆಳಿಗ್ಗೆ 11.30ಕ್ಕೆ ಸಾರ್ವಜನಿಕರ ಸಮಕ್ಷಮದಲ್ಲಿ ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಮತ್ತು ಹರಾಜು ನಡೆಯುವ ಸ್ಥಳ | ವಿಲೇವಾರಿ ಮಾಡುವ ಹಣ್ಣಿನ ಫಸಲು | ಮರಗಳ ಸಂಖ್ಯೆ | ಠೇವಣಿ ಹಣ ರೂ.ಗಳಲ್ಲಿ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 1. | ಹುಳಿಮಾವು ತೋಟಗಾರಿಕೆ ಕ್ಷೇತ್ರ ಬನ್ನೇರುಘಟ್ಟ ರಸ್ತೆ, ಬೆಂಗಳೂರು-79. | ಸಪೋಟ | 731 | 10,000/- | 12.09.2005 ಸಾಯಂಕಾಲ 5.00 ಗಂಟೆಯವರೆಗೆ | 13.09.2005 ಬೆಳಿಗ್ಗೆ 11.30 ಗಂಟೆಗೆ |

ಟೆಂಡರ್ ಹಾಕುವವರು ಟೆಂಡರ್ ಫಾರಂನ್ನು ರೂ.25.00 ಪಾವತಿ ಮಾಡಿ ಸಹಾಯಕ ತೋಟಗಾರಿಕೆ ನಿರ್ದೇಶಕರು ಕಛೇರಿಯಿಂದ ಪಡೆಯಬೇಕು. ಟೆಂಡರ್‌ದಾರರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ಟೆಂಡರ್‌ದಾರರು ನಮೂದಿಸಿರುವ ಟೆಂಡರ್ ಮೊತ್ತದ ಶೇ.50 ಭಾಗದ ಮೊತ್ತವನ್ನು ಕ್ರಾಸ್ಡ್ ಡಿ.ಡಿ. ರೂಪದಲ್ಲಿ ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ಕ್ಷೇತ್ರ ಇವರ ಹೆಸರಿನಲ್ಲಿ ಪಡೆದು ಭರ್ತಿ ಮಾಡಿದ ಟೆಂಡರ್ ಫಾರಂಗೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಇತ್ಯಾದಿಗಳನ್ನು ಸರಿಯಾಗಿ ದಾಖಲಿಸಬೇಕು. ಇಲ್ಲದಿದ್ದರೆ, ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಭರ್ತಿ ಮಾಡಿದ ಟೆಂಡರ್ ಫಾರಂ ಮತ್ತು ಡಿ.ಡಿ.ಗಳನ್ನು ಮೊಹರಾದ ಲಕೋಟೆಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯೊಳಗೆ ಸಲ್ಲಿಸಬೇಕು.

ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗೆ ಪೂರ್ತಿ ಹಣವನ್ನು ಡಿ.ಡಿ. ರೂಪದಲ್ಲಿ ಪಾವತಿಸಿ ಫಸಲನ್ನು 31.12.2005ರವರೆಗೆ ರೂಢಿಸಿಕೊಳ್ಳಬಹುದು. ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ.

ಹೆಚ್ಚಿನ ವಿವರಗಳನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ಇವರನ್ನು ಸಂಪರ್ಕಿಸಿ ಪಡೆದುಕೊಳ್ಳಬಹುದು.

ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್.486 ಹುಳಿಮಾವು.

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು
## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಇ:ಸಾಮಾತ/ ಹತಶೇಸಂ/ ಸತೋಅ/ 33/ 2004-05, ದಿನಾಂಕ:25ನೇ ಆಗಸ್ಟ್, 2005**

**ವಿಷಯ :** ತೋಟಗಾರಿಕೆ ಇಲಾಖೆಯ ವಶದಲ್ಲಿರುವ 4 ಶೀತಲ ಗೃಹಗಳನ್ನು ಗುತ್ತಿಗೆ ಆಧಾರದ ಮೇಲೆ ವಹಿಸಿಕೊಡುವ ಬಗ್ಗೆ.

**ಉಲ್ಲೇಖ :** 1. ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.
2. ಸರ್ಕಾರದ ಆದೇಶ ಪತ್ರ ಸಂಖ್ಯೆ: ಎಸಿಎನ್‌ಡಿಸಿಡಿ 1530, ದಿನಾಂಕ: 07.11.2000.
3. ಸರ್ಕಾರದ ಪತ್ರ ಸಂಖ್ಯೆ: ಕೃತೋಇ 586 ತೋಇವಿ 2003, ದಿನಾಂಕ: 19.05.2005.

ತೋಟಗಾರಿಕೆ ಇಲಾಖೆಯ ವಶದಲ್ಲಿರುವ 800 ಮೆಟ್ರಿಕ್‌ಟನ್ ಸಾಮರ್ಥ್ಯದ 3 ಶೀತಲ ಗೃಹಗಳು- ಲಾಲ್‌ಬಾಗ್, ಬೆಂಗಳೂರು, ಕೋಲಾರ ಮತ್ತು ಚಿಕ್ಕಬಳ್ಳಾಪುರ ಹಾಗೂ ಹಾಸನದಲ್ಲಿನ 120 ಮೆಟ್ರಿಕ್ ಟನ್ ಸಾಮರ್ಥ್ಯದ 1 ಶೀತಲಗೃಹ (ಹಾಸನ) ಯಥಾಸ್ಥಿತಿಯಲ್ಲಿ ಪ್ರಸಿದ್ಧ ಶೀತಲಗೃಹ ಸಂಸ್ಥೆ/ ಸಹಕಾರಿ ಸಂಘ/ ವ್ಯಕ್ತಿಗಳಿಗೆ ದಿನಾಂಕ: 01.10.2005 ರಿಂದ 5 ವರ್ಷಗಳ ಅವಧಿಗೆ ಗುತ್ತಿಗೆಗೆ ವಹಿಸಿಕೊಡಲು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಆಸಕ್ತಿಯುಳ್ಳ ಸಂಸ್ಥೆಗಳು 4 ಶೀತಲ ಗೃಹಗಳಿಗೆ ಪ್ರತ್ಯೇಕವಾಗಿ ಗರಿಷ್ಟ ವಾರ್ಷಿಕ ಗುತ್ತಿಗೆ ದರವನ್ನು ನಮೂದಿಸಬೇಕು.

ಟೆಂಡರ್ ಅರ್ಜಿಗಳನ್ನು ಪಡೆಯುವ ದಿನಾಂಕ ಮತ್ತು ಸಮಯ: 29.08.2005 ರಿಂದ 09.09.2005 ರವರೆಗೆ ಬೆಳಿಗ್ಗೆ 10.30 ರಿಂದ ಸಂಜೆ 4.30 ರವರೆಗೆ.

ಟೆಂಡರ್ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 20.09.2005 ರಂದು ಮಧ್ಯಾಹ್ನ 3.00 ಗಂಟೆಯವರೆಗೆ.

ಟೆಂಡರ್ ಅರ್ಜಿಗಳನ್ನು ತೆರೆಯುವ ದಿನಾಂಕ: 22.09.2005 ರಂದು ಮಧ್ಯಾಹ್ನ 12.00 ಗಂಟೆಗೆ.

ಟೆಂಡರ್ ಅರ್ಜಿಗಳನ್ನು ರೂ.500/- +KST ಗಳನ್ನು ನಗದು ಅಥವಾ ಡಿ.ಡಿ.ಯನ್ನು ತೋಟಗಾರಿಕೆ ನಿರ್ದೇಶಕರ ಹೆಸರಿನಲ್ಲಿ ಪಡೆದು ಸಲ್ಲಿಸುವುದು. ಅಂಚೆ ಅಥವಾ ಕೊರಿಯರ್ ಮುಖಾಂತರ ಅರ್ಜಿಗಳನ್ನು ಪಡೆಯಲು ರೂ.175/- ಅಧಿಕ ಶುಲ್ಕವನ್ನು ನೀಡಬೇಕು.

ಟೆಂಡರ್‌ದಾರರು 4 ಶೀತಲ ಗೃಹಗಳನ್ನು ಕೆಳಕಂಡ ದಿನಾಂಕಗಳಂದು ಸೂಚಿತ ಸಮಯಗಳಲ್ಲಿ ಭೇಟಿ ನೀಡಬಹುದು.

| ಕ್ರ.ಸಂ. | ಶೀತಲಗೃಹ | ದಿನಾಂಕ | ಸಮಯ |
|---|---|---|---|
| 1. | ಲಾಲ್‌ಬಾಗ್, ಬೆಂಗಳೂರು | 01.09.2005 | 10.30 ರಿಂದ 4.30ರವರೆಗೆ |
| 2. | ಕೋಲಾರ | 02.09.2005 | 10.30 ರಿಂದ 4.30ರವರೆಗೆ |
| 3. | ಚಿಕ್ಕಬಳ್ಳಾಪುರ | 03.09.2005 | 10.30 ರಿಂದ 4.30ರವರೆಗೆ |
| 4. | ಹಾಸನ | 05.09.2005 | 10.30 ರಿಂದ 4.30ರವರೆಗೆ |

ಟೆಂಡರ್‌ದಾರರು ನಮೂದಿತ ವಾರ್ಷಿಕ ಗುತ್ತಿಗೆ ದರದ ಶೇಕಡ 25ರಷ್ಟು ಮೊತ್ತವನ್ನು ಇಎಂಡಿ ರೂಪದಲ್ಲಿ ಟೆಂಡರ್ ಅರ್ಜಿಯೊಡನೆ ಲಗತ್ತಿಸಿ ಸಲ್ಲಿಸಬೇಕು. ಇಲ್ಲವಾದಲ್ಲಿ ಟೆಂಡರ್ ಅರ್ಜಿಗಳನ್ನು ನಿರಾಕರಿಸಲಾಗುವುದು. ಇಎಂಡಿಯನ್ನು ತೋಟಗಾರಿಕೆ ನಿರ್ದೇಶಕರವರ ಹೆಸರಿನಲ್ಲಿ ಪಡೆದ ಡಿ.ಡಿ. ಮುಖಾಂತರ ಸಲ್ಲಿಸಬೇಕು. ಇತರೆ ಷರತ್ತುಗಳು ಅನ್ವಯಿಸುತ್ತವೆ.

ಮುಂದುವರೆದು ಯಾವುದೇ ಕಾರಣ ನೀಡದೆ ಟೆಂಡರ್‌ನ್ನು ಅನುಮೋದಿಸುವ ಅಥವಾ ನಿರಾಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಕಾಯ್ದಿರಿಸಿಕೊಂಡಿರುತ್ತಾರೆ.

ತೋಟಗಾರಿಕೆ ನಿರ್ದೇಶಕರು,
ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು.

**ಷರತ್ತು ಮತ್ತು ನಿಬಂಧನೆಗಳು:**

1. ತೋಟಗಾರಿಕೆ ಇಲಾಖೆಯು 800 ಮೆಟ್ರಿಕ್ ಟನ್ ಸಾಮರ್ಥ್ಯದ 3 ಶೀತಲಗೃಹಗಳು- ಲಾಲ್‌ಬಾಗ್, ಬೆಂಗಳೂರು, ಕೋಲಾರ ಮತ್ತು ಚಿಕ್ಕಬಳ್ಳಾಪುರ ಹಾಗೂ ಹಾಸನದಲ್ಲಿನ 120 ಮೆಟ್ರಿಕ್ ಟನ್ ಸಾಮರ್ಥ್ಯದ 01 ಶೀತಲಗೃಹದ (ಒಟ್ಟು 4 ಶೀತಲಗೃಹಗಳು) ಮಾಲೀಕತ್ವವನ್ನು ಹೊಂದಿರುತ್ತದೆ.
2. ಶೀತಲಗೃಹಗಳನ್ನು ಯಥಾಸ್ಥಿತಿಯಲ್ಲಿ 5 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ವಹಿಸಿಕೊಡಲಾಗುವುದು. 5 ವರ್ಷಗಳ ಅವಧಿಯು ಮುಗಿದ ನಂತರ ಪರಸ್ಪರ ಒಪ್ಪಿಗೆ ಮೇರೆಗೆ ಹೆಚ್ಚುವರಿ ಷರತ್ತು ನಿಬಂಧನೆ ಹಾಗೂ ಮರು ಪಾವತಿಸಲಾಗದ ಗುತ್ತಿಗೆ ದರದ ಬಗ್ಗೆ ನಿರ್ಧರಿಸಲಾಗುವುದು.
3. ಟೆಂಡರ್‌ದಾರರು 5 ವರ್ಷ ಗುತ್ತಿಗೆ ಅವಧಿಗೆ ಶೀತಲಗೃಹದ ಯಂತ್ರೋಪಕರಣಗಳಿಗೆ ರೂ.10.00 ಲಕ್ಷಗಳ ಬ್ಯಾಂಕ್ ದೃಢೀಕರಣವನ್ನು/ ಇತರೆ ಭದ್ರತಾ ಠೇವಣಿ ಸಲ್ಲಿಸಬೇಕು. ಸದರಿ ಭದ್ರತಾ ಠೇವಣಿಯನ್ನು, ಶೀತಲಗೃಹಗಳನ್ನು ಸುಸ್ಥಿತಿಯಲ್ಲಿ ಇಲಾಖೆಗೆ ಹಿಂತಿರುಗಿಸಿದ ನಂತರ ಹಿಂತಿರುಗಿಸಲಾಗುವುದು. ಭದ್ರತಾ ಹಣವನ್ನು ಕ್ರಾಸ್ ಮಾಡಿದ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸಬೇಕು.
4. ಪ್ರತಿ ವರ್ಷ ಗುತ್ತಿಗೆ ಹಣವನ್ನು ಇಲಾಖೆಗೆ ಮಾರ್ಚ್ ಮಾಹೆಯ ಒಳಗೆ ಪಾವತಿಸಬೇಕು, ಇಲ್ಲವಾದಲ್ಲಿ ಶೇಕಡ 5ರಷ್ಟು ಅಧಿಕ ದಂಡ ವಿಧಿಸಲಾಗುವುದು. ಪ್ರತಿ ವರ್ಷ ಗುತ್ತಿಗೆ ದರವನ್ನು ಶೇಕಡ 5ರಷ್ಟು ಹೆಚ್ಚಳ ಮಾಡಲಾಗುವುದು.
5. ಗುತ್ತಿಗೆ ಅವಧಿಯಲ್ಲಿ ಗುತ್ತಿಗೆದಾರರು ಶೀತಲಗೃಹಗಳನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ ಅಥವಾ ಉಪಗುತ್ತಿಗೆ ನೀಡುವಂತಿಲ್ಲ.
6. ಶೀತಲಗೃಹಗಳ ಎಲ್ಲಾ ಯಂತ್ರೋಪಕರಣ ಹಾಗೂ ಸಾಧನ ಸಾಮಗ್ರಿಗಳ ದುರಸ್ತಿಗಳನ್ನು ಗುತ್ತಿಗೆದಾರರು ಇಲಾಖೆಯ ಪೂರ್ವಾನುಮತಿ ಪಡೆದು ತಮ್ಮ ಸ್ವಂತ ಖರ್ಚಿನಿಂದ ಭರಿಸಬೇಕು ಮತ್ತು ಶೀತಲಗೃಹಗಳ ಕಟ್ಟಡಕ್ಕೆ ಯಾವುದೇ ಧಕ್ಕೆಯಾಗದಂತೆ ಎಚ್ಚರವಹಿಸಬೇಕು.
7. ಶೀತಲಗೃಹಗಳ ನಿರ್ವಹಣೆಗೆ ಬೇಕಾಗುವ ತಾಂತ್ರಿಕ ಹಾಗೂ ಇತರೆ ಸಿಬ್ಬಂದಿಯನ್ನು ಗುತ್ತಿಗೆದಾರರೇ ನೇಮಿಸಿಕೊಳ್ಳಬೇಕು ಮತ್ತು ಸದರಿ ಸಿಬ್ಬಂದಿಯ ವೇತನ ಭವಿಷ್ಯ ನಿಧಿ, ಇ.ಎಸ್.ಐ. ಹಾಗೂ ಇತರೆ ವೆಚ್ಚಗಳನ್ನು ಗುತ್ತಿಗೆದಾರರು ತಾವೇ ಭರಿಸಬೇಕು.
8. ಶೀತಲಗೃಹಗಳ ಯಾವುದಾದರೂ ಯಂತ್ರೋಪಕರಣ/ ಭಾಗವನ್ನು ಮಾರ್ಪಡಿಸಬೇಕಾದಲ್ಲಿ ಅಥವಾ ಬಹು ಕೊಠಡಿ ವ್ಯವಸ್ಥೆಯನ್ನು ಅಳವಡಿಸಬೇಕಾದಲ್ಲಿ ಗುತ್ತಿಗೆದಾರರು ಇಲಾಖೆಯ ಅನುಮತಿ ಪಡೆದು ಸ್ವಂತ ಖರ್ಚಿನಿಂದ ಭರಿಸಬೇಕು.
9. ಗುತ್ತಿಗೆದಾರರು ಶೀತಲಗೃಹಗಳಿಗೆ ಸಂಬಂಧಿಸಿದ ವಿದ್ಯುತ್‌ಚ್ಛಕ್ತಿ ಮತ್ತು ನೀರಿನ ವೆಚ್ಚ ಹಾಗೂ ಇತರೆ ಶಾಸನಬದ್ಧ ಸಂದಾಯಗಳನ್ನು ಸಂಬಂಧಪಟ್ಟ ನಿಗಮಗಳಿಗೆ ನಿಗದಿತ ಅವಧಿಯೊಳಗೆ ಭರಿಸಿ ಇಲಾಖೆಗೆ ಮಾಹಿತಿ ನೀಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಸದರಿ ನಿಗಮಗಳನ್ನು ಹೆಚ್ಚುವರಿ ವೆಚ್ಚಗಳನ್ನು ಗುತ್ತಿಗೆದಾರರೇ ಭರಿಸುವುದು.
10. ಶೀತಲಗೃಹಗಳಲ್ಲಿ ರೈತರ ಉತ್ಪನ್ನಗಳಿಗೆ ಮೊದಲ ಆದ್ಯತೆ ಹಾಗೂ ಇತರೆ ಕೃಷಿ ಮತ್ತ ಹೈನು ಪದಾರ್ಥಗಳಿಗೆ ಆದ್ಯತೆ ನೀಡಬೇಕು.
11. ಗುತ್ತಿಗೆದಾರರು ಶೀತಲಗೃಹಗಳಲ್ಲಿ ಶೇಖರಿಸುವ ಎಲ್ಲಾ ಸಾಮಗ್ರಿಗಳಿಗೆ ಸ್ವಂತ ಖರ್ಚಿನಲ್ಲೆ ವಿಮೆ ಮಾಡಿಸತಕ್ಕದ್ದು ಹಾಗೂ ಲೈಸೆನ್ಸ್ ಪರ್ಮಿಟ್, ಮಾರುಕಟ್ಟೆ ಬೆಲೆಕುಸಿತ ಇತರೆ ವೆಚ್ಚಗಳನ್ನು ಸಹ ಗುತ್ತಿಗೆದಾರರೆ ಭರಿಸಬೇಕು.
12. ಶೀತಲಗೃಹಗಳಲ್ಲಿನ ಯಂತ್ರೋಪಕರಣಗಳ ದುರಸ್ಥಿ ಅಥವಾ ಶೇಖರಣೆ ಕೊರತೆಯಿಂದಾಗಿ ಉಂಟಾಗುವ ನಷ್ಟಗಳಿಗೆ ಗುತ್ತಿಗೆದಾರರೇ ಹೊಣೆಯಾಗಿರುತ್ತಾರೆ.
13. ಗುತ್ತಿಗೆದಾರರು ಶೀತಲಗೃಹಗಳಲ್ಲಿ ಯಾವುದೇ ಕಾನೂನು ಬಾಹಿರ ಚಟುವಟಿಕೆಗಳನ್ನು ಕೈಗೊಳ್ಳಬಾರದು.
14. ಶೀತಲಗೃಹಗಳ ಸ್ಥಾವರ, ಆವರಣ ಹಾಗೂ ಯಂತ್ರೋಪಕರಣಗಳನ್ನು ಯಾವುದೇ ಸಮಯದಲ್ಲಿಯಾದರೂ ಪರಿಶೀಲಿಸಲು ಗುತ್ತಿಗೆದಾರರು ಗೇಣಿದಾರರಿಗೆ ಅಥವಾ ಗೇಣಿದಾರರ ಪ್ರತಿನಿಧಿಗಳಿಗೆ ಅನುಮತಿ ನೀಡಬೇಕು.
15. ವಿಧಿಸಿರುವ ಷರತ್ತುಗಳನ್ನು ಪಾಲಿಸುವಲ್ಲಿ ಗುತ್ತಿಗೆದಾರರು ತಪ್ಪಿದರೆ ಗೇಣಿದಾರರು ಗುತ್ತಿಗೆ ಒಡಂಬಡಿಕೆಯನ್ನು ರದ್ದುಗೊಳಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

ತೋಟಗಾರಿಕೆ ನಿರ್ದೇಶಕರು,

ಪಿ.ಆರ್.487 ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು.

## ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಬಂದರು ಮತ್ತು ಒಳನಾಡು, ನಾವಿಕ ಶಿಲ್ಪಿಯವರ ಕಛೇರಿ, ಬೈತಖೋಲ್, ಕಾರವಾರ-581302

## ಟೆಂಡರ್ ಅಧಿಸೂಚನೆ ಸಂಖ್ಯೆ: ಜಿಎನ್‌ಎಲ್:ಕ್ರ.ಸಂ.5: 2005-06, ದಿನಾಂಕ:20ನೇ ಆಗಸ್ಟ್, 2005

ಕರ್ನಾಟಕ ರಾಜ್ಯ ಬಂದರುಗಳಲ್ಲೊಂದಾದ ಕಾರವಾರ ಬಂದರಿನಲ್ಲಿ ಟೈಮ್ ಚಾರ್ಟರ್ ಆಧಾರದಲ್ಲಿ 15 ಟನ್ನು ಬೋಲಾರ್ಡ್ ಪುಲ್ 3 ಮೀಟರ್ ಡ್ರಾಫ್ಟ್ ಉಳ್ಳ 1 ಜಗ್ಗು ನಾವೆ (Tug) ಗಳನ್ನು ನೌಕಾ ಚಟುವಟಿಕೆಗಳ ಸಂಬಂಧ ಕಾರ್ಯದಲ್ಲಿ ಒದಗಿಸುವ ಬಗ್ಗೆ ಅನುಭವವುಳ್ಳ ಜಗ್ಗು ನಾವೆ ಅರ್ಹ ಮಾಲಿಕರಿಂದ ಮೊಹರು ಮಾಡಿದ ಸ್ಪರ್ಧಾತ್ಮಕ ಟೆಂಡರನ್ನು ಆಹ್ವಾನಿಸಲಾಗಿದೆ.

1. ಟೆಂಡರ್ ಶೆಡ್ಯೂಲ್ಡನ್ನು ಪಡೆಯಲಿಚ್ಚಿಸುವ ಟೆಂಡರುದಾರರು ಟೆಂಡರ್ ಫೀ ಬಾಬ್ತು ರೂ.1000.00 (ಒಂದು ಸಾವಿರ)+200.00 ಅಂಚೆವೆಚ್ಚ, ಅಂಚೆದ್ವಾರ ಕಳುಹಿಸಬೇಕಾದಲ್ಲಿ ಬೇಡಿಕೆ ಹುಂಡಿ ರೂಪದಲ್ಲಿ ನಾವಿಕ ಶಿಲ್ಪಿ ಕಾರವಾರ ಇವರ ಹೆಸರಿನಲ್ಲಿ ಪಡೆದು ಕೋರಿಕೆ ಅರ್ಜಿಯೊಂದಿಗೆ ಒಪ್ಪಿಸುವದು. ಕೋರಿಕೆ ಪತ್ರ ಸಲ್ಲಿಸಲು ಕೊನೆಯ ದಿನಾಂಕ: 19.09.2005.
2. ಟೆಂಡರ್ ಶೆಡ್ಯೂಲ್ಡನ್ನು ದಿನಾಂಕ: 22.09.2005 ಮತ್ತು 23.09.2005 ರಂದು ಈ ಕಛೇರಿಯಿಂದ ನೀಡಲಾಗುವುದು.
3. ಭರ್ತಿ ಮಾಡಿದ ಟೆಂಡರನ್ನು ಇ.ಎಂ.ಡಿ. ಯೊಂದಿಗೆ ದಿನಾಂಕ: 05.10.2005ರ 4.00 ಗಂಟೆಯೊಳಗೆ ನಾವಿಕ ಶಿಲ್ಪಿ, ಕಾರವಾರ ಇವರಿಗೆ ತಲುಪತಕ್ಕದ್ದು. ತಾಂತ್ರಿಕ ಬಿಡ್ಡನ್ನು ಅದೇ ದಿನ 4.30 ಗಂಟೆಗೆ ಉಪಸ್ಥಿತರಿದ್ದ ಟೆಂಡರುದಾರರ ಸಮ್ಮುಖದಲ್ಲಿ ಸಾಧ್ಯವಾದಲ್ಲಿ ತೆರೆಯಲಾಗುವುದು.
4. ಟೆಂಡರ್ ನಮೂನೆಯ ಬೆಲೆಯನ್ನು ಹಿಂದಕ್ಕೆ ನೀಡಲಾಗುವುದಿಲ್ಲ. ಅಂಚೆ ಮೂಲಕ ರವಾನಿಸಿದ ಟೆಂಡರು ತಡವಾಗಿ ಮುಟ್ಟಿದ: ಕಳೆದು ಹೋದ ಬಗ್ಗೆ ಈ ಕಛೇರಿಯು ಜವಾಬ್ದಾರರಲ್ಲ.

ಪಿ.ಆರ್.489 ನಾವಿಕ ಶಿಲ್ಪಿ ಕಾರವಾರ.

**ಶಿಕ್ಷಣ ಇಲಾಖೆ, ಹುಬ್ಬಳ್ಳಿ ತಾಲ್ಲೂಕು, ಗ್ರಾಮೀಣ ವಲಯ, ಹುಬ್ಬಳ್ಳಿ**

**ನಮೂನೆ-1**

**(9ನೇ ನಿಯಮ ನೋಡಿ)**

**ಅಧಿಸೂಚನೆ**

ಸರಕಾರಿ ಮಾದರಿ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆ, ಉಣಕಲ್, ತಾಲ್ಲೂಕು ಹುಬ್ಬಳ್ಳಿ, ಧಾರವಾಡ ಜಿಲ್ಲೆ ಕಾರ್ಯಾಲಯದಲ್ಲಿ ಸಹ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ **"ಶ್ರೀ ಶರತ ಜ್ಞಾನೇಶ್ವರ ಗಾಂಡೋಳಿ"** ಇವರಿಗೆ ಅವರ ಹೆಸರನ್ನು **"ಶ್ರೀ ಶರತ ಜ್ಞಾನೇಶ್ವರ ಗಾಯಡೋಳಿ"** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು,
ಹುಬ್ಬಳ್ಳಿ ತಾಲ್ಲೂಕು, ಗ್ರಾಮೀಣ ವಲಯ, ಹುಬ್ಬಳ್ಳಿ.

ಪಿ.ಡಿ.91

**THE KARNATAKA STATE BOARD OF WAKFS**
**"DARUL AWKAF" NO.6, CUNNINGHAM ROAD, BANGALORE-560052**
**CERTIFICATE OF REGISTRATION**
**No. KTW/ REG/ 12/ BNU/ 2005-2006, Bangalore, Dated:4th August, 2005**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| | Jamia Masjid, Khabrasthan & Idgah (Sunni) Hegganahalli, Yeshwanthpur Hobli, Bangalore-91. | Sy.No.345 of Hegganahalli.<br>**Measuring:**<br>96 + 86'x '236'<br>**Boundaries:**<br>**East:** Road.<br>**West:** Road.<br>**North:** Road.<br>**South:** House belonging to Muniyappa. | Managing Committee by its President. |

Chief Executive Officer,
Karnataka State Board of Wakfs.

**THE KARNATAKA STATE BOARD OF WAKFS**
**"DARUL AWKAF" NO.6, CUNNINGHAM ROAD, BANGALORE-560052**
**CERTIFICATE OF REGISTRATION**
**No. KTW/ REG/ 13/ BNU/ 2005-2006, Bangalore, Dated:3rd August, 2005**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 470 | Khabrasthan belonging to Jamia Masjid, (Sunni) Hegganahalli, Yeshwanthpur Hobli, Bangalore North, Bangalore-560091. | Sy.No.99 of Karribonahalli Village Pailwan Sabpalaya Yeshwanthpur Hobli, Chokkasandra Panchayath, Bangalore North, Bangalore-560091.<br>**Measuring:** 30 Guntas.<br>**Boundaries:**<br>**East:** Road.<br>**West:** Remaining portion of same property of Jamal Sab.<br>**North:** Land of Masthan Sab.<br>**South:** Land of Peer Sab. | Managing Committee Jamia Masjid, Hegganahalli, Bangalore by its President. |

Chief Executive Officer,
Karnataka State Board of Wakfs.

PD-88

**THE KARNATAKA STATE BOARD OF WAKFS**
**"DARUL AWKAF" NO.6, CUNNINGHAM ROAD, BANGALORE-560052**
**CERTIFICATE OF REGISTRATION**
**No. KSBW/ REG/ 53/ BGT/ 2001-2002, Bangalore, Dated: 19th November, 2001**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| | New Muslim Educational & Charitable Trust (Sunni) Wakf Ilkal Village Hungund Taluk, Bagalkot District. | **PROPERTY:**<br>Sy.No.38/ 1/ 2B/ 1,<br>**Measuring:** 1 Acres- 0 Guntas.<br>**Boundaries:**<br>**East:** Part of said land<br>**West:** Public Road<br>**North:** Sy.No.36.<br>**South:** Sy.No. 37. | New Muslim Educational and Charitable Trust (Sunni Wakf) Ilkal Village Hungund Taluk Bagalkot District. Managed by its Muthawalli. |

Addl.Chief Executive Officer,
Karnataka State Board of Wakfs, Bangalore.

PD-89

**THE KARNATAKA STATE BOARD OF WAKFS**
**"DARUL AWKAF" NO.6, CUNNINGHAM ROAD, BANGALORE-560052**
**CERTIFICATE OF REGISTRATION**
**No. KTW/ REG/ 80/ BJR/ 2004-2005, Bangalore, Dated: 22nd June, 2005**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 446 | Makka Masjid (Sunni), Mehboobnagar, Muddebihal Taluk, Bijapur District. | Sy.No.112, Muddebihal.<br>**Measuring:** 100'x100'<br>**Boundaries:**<br>**North:** T.M.C. Open Space.<br>**South:** Narayanpur Road.<br>**East:** Road & thereafter Urdu School Open Space.<br>**West:** Road & T.M.C. Open Space. | The Chairman, Makka Masjid, Mehboobnagar, Muddebihal, Bijapur District. |

Chief Executive Officer,
Karnataka State Board of Wakfs.

PD-90

**ಕರ್ನಾಟಕ ಮೃಗಾಲಯ ಪ್ರಾಧಿಕಾರ**
**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**
**ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ**
**ಸಂಖ್ಯೆ: ಎ4/ ಬಿಎಫ್‌ಪಿ/ ಸಿಆರ್-15/ 2005-06, ದಿನಾಂಕ: 27ನೇ ಆಗಸ್ಟ್, 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್‌ನ ಬಟರ್ ಫ್ಲೈ ಪಾರ್ಕಿನಲ್ಲಿ ಈ ಕೆಳಕಂಡ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ. ಟೆಂಡರ್ ಅರ್ಜಿಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಪಿ.ಡಬ್ಲ್ಯೂ.ಡಿ./ ಸಿ.ಪಿ.ಡಬ್ಲ್ಯೂ.ಡಿ ಯ 3ನೇ ದರ್ಜೆ ಮತ್ತು ಮೇಲ್ಪಟ್ಟ ದರ್ಜೆಯ ಗುತ್ತಿಗೆದಾರರು ಮತ್ತು ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್‌ನ ಗುತ್ತಿಗೆದಾರರಿಂದ ಈ ಕಛೇರಿಗೆ ದಿನಾಂಕ: 12.09.2005ರ ಮಧ್ಯಾಹ್ನ 3.00 ಗಂಟೆಯ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

**ಷೆಡ್ಯೂಲ್**

| ಕ್ರ.ಸಂ. | ಕಾಮಗಾರಿಗಳ ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಕೆಲಸ ಪೂರ್ಣಗೊಳಿಸಲು ಅವಧಿ |
|---|---|---|---|---|
| 1. | ಬನ್ನೇರುಘಟ್ಟ ಬಟರ್ ಫ್ಲೈ ಪಾರ್ಕಿನಲ್ಲಿ ರಸ್ತೆಗೆ ಸುಟ್ಟ ಬಿಲ್ಲೆ ಕಲ್ಲು ಚಪ್ಪಡಿಗಳನ್ನು ಹಾಕುವ ಬಗ್ಗೆ. | ರೂ. 3.10 ಲಕ್ಷ | ರೂ.6,200/- | 30 ದಿನಗಳು |

**ಸೂಚನೆ:**

1. ಟೆಂಡರುದಾರರು ರೂ.555/- (ತೆರಿಗೆಗಳು ಸಹಿತ) ಟೆಂಡರು ಫಾರಂ ಅನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 09.09.2005 ರಿಂದ 10.09.2005ರ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು.
2. ಟೆಂಡರನ್ನು ದಿನಾಂಕ: 12.09.2005 ರಂದು ಸಾಯಂಕಾಲ 4.00 ಗಂಟೆಗೆ ತೆರೆಯಲಾಗುವುದು. ಹಾಗೂ ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ಬಿ. ಮಾರ್ಕಂಡೇಯ, ಭಾ.ಅ.ಸೇ.)**
ಕಾರ್ಯನಿರ್ವಾಹಕ ನಿರ್ದೇಶಕರು ಮತ್ತು ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ಬಯಲಾಜಿಕಲ್
ಪಾರ್ಕ್, ಬೆಂಗಳೂರು-83.

ಪಿ.ಡಿ.91

**ZOO AUTHORITY OF KARNATAKA**
**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83**
**BRIEF SHORT TERM TENDER NOTIFICATION**
**No.A4-BFP-CR-15/ 2005-06, Dated: 27th August, 2005**

It is hereby notified for the general information of the public that sealed tenders are invited and will be received by the undersigned from the registered PWD/ CPWD contracts of Class III and above and from the registered contractors of this office.

**SCHEDULE**

| Sl. No. | Particulars of works | Approx cost of work put to tender | EMD to be furnished | Time for execution of works |
|---|---|---|---|---|
| 1. | Providing Burnt Stone Slab paving to the road surface of Butterfly Park at Bannerghatta Biological Park. | Rs.3.10 lakhs | Rs.6,200/- | 30 days |

1. The tender forms with detailed tender conditions can be had from the office of the undersigned during the office hours on working days on payment of Rs.555/- per form including taxes from 09.09.2005 to 10.09.2005.
2. Receipt of tenders is up to 3.00 PM on 12.09.2005.
3. Opening of Tenders at 4.00 PM on 12.09.2005.
4. Further details can be had from the office of the undersigned during the office hours on working days.

**K.B. MARKANDAIAH, IFS**
Executive Director & Deputy Conservator
of Forests, Bannerghatta Biological Park,
Bangalore-83.

PD-91

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**
**ಟೆಂಡರ್ ಪ್ರಕಟಣೆ**
**ಸಂಖ್ಯೆ: ಸಿಆಸುಇ 97 ಡಿಟಿಎಂ 2005, ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಚೇರಿಗಳಲ್ಲಿ ಈ ಕೆಳಕಂಡ ಮೆ: ಜೆರಾಕ್ಸ್ ಮೋದಿ ಕಾರ್ಪ್ ಸಂಸ್ಥೆಯ ವಿವಿಧ ಮಾದರಿಯ ಯಂತ್ರಗಳಿದ್ದು, ಇವುಗಳ ವಿಸ್ತಾರವಾದ (Comprehensive) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಲು ಸರ್ಕಾರವು ಉದ್ದೇಶಿಸಿ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿದೆ.

| ಕ್ರ.ಸಂ. | ಮೋದಿ ಕಾಪಿಯರ್ ಯಂತ್ರದ ನಮೂನೆ | ಸಂಖ್ಯೆ |
|---|---|---|
| 1 | 1025 | 15 |
| 2 | 5216 | 07 |
| 3 | 5223 | 35 |
| 4 | 5620 | 12 |
| 5 | 5821–ಐವಿ | 09 |
| 6 | 5816–ಎಲ್‌ವಿ | 02 |
| | **ಒಟ್ಟು** | **80** |

ಇಚ್ಛೆಯುಳ್ಳವರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ.100.00+ಶೇಕಡ 12.5 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು

ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಕಾರ್ಯಕಾರಿ–1), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀದಿಯನ್ನು ತೋರಿಸಿ ಪಡೆದುಕೊಳ್ಳಹುದು. **ದಿನಾಂಕಃ19–09–2005ರಂದು ಮಧ್ಯಾಹ್ನ 3:30 ಗಂಟೆಯವರೆಗೆ** ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು **ಕೊನೆಯ ದಿನಾಂಕಃ 20–09–2005 ರಂದು ಮಧ್ಯಾಹ್ನ 3:30 ಗಂಟೆ.** ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು–560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ **ದಿನಾಂಕಃ 21–09–2005 ರಂದು ಮಧ್ಯಾಹ್ನ 4:30 ಗಂಟೆಗೆ ತೆರೆಯಲಾಗುವುದು.** ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1) ಟೆಂಡರ್ ಅರ್ಜಿಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2) ಮೊಹರಾದ ಟೆಂಡರ್ ಲಕೋಟೆಯ ಮೇಲೆ "ಮೋದಿ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
3) ಟೆಂಡರ್‌ದಾರರು ಈಗಾಗಲೇ ಇಂತಹ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ಮಾಡುತ್ತಿರುವುದಕ್ಕೆ ದಾಖಲೆ:ಮಾಹಿತಿಯನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.
4) ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
5) ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕಲ (Comprehensive) ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
6) ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು–560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7) ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
8) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು.
9) ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ಧೃಡೀಕರಣದ ಆಧಾರದ ಮೇಲೆ ಪ್ರತಿ ಮೂರು ತಿಂಗಳಿಗೊಮ್ಮೆ ನಾಲ್ಕು ಸಮಾನ ಕಂತುಗಳಲ್ಲಿ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ–1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22033440 ಅಥವಾ 22033487 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ.ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಕಾರ್ಯಕಾರಿ–1)

**ಟೆಂಡರ್ ನಮೂನೆ**

ಟೆಂಡರ್ ನಮೂನೆ ಸಂಖ್ಯೆ:

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿರುವ ವಿವಿಧ ಮಾದರಿಯ ಮೋದಿ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆಯ ಬಗ್ಗೆ ಟೆಂಡರ್.

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ<br>ಸಿಆಸುಇ (ಕಾರ್ಯಕಾರಿ–1) ಕೊಠಡಿ ಸಂಖ್ಯೆ: 23,<br>ವಿಧಾನಸೌಧ, ಬೆಂಗಳೂರು–560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 20–09–2005 ಮಧ್ಯಾಹ್ನ 3:30 ಗಂಟೆಯೊಳಗೆ |
| ಟೆಂಡರ್ ತೆರೆಯುವ ದಿನಾಂಕ | : | 21–09–2005 ಮಧ್ಯಾಹ್ನ 4:30 ಗಂಟೆಗೆ.<br>ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಫಾರಂ ದರ | : | ರೂ. 100.00 + ಶೇಕಡ 12.5 ಮೌಲ್ಯವರ್ಧಿತ ತೆರಿಗೆ<br>(ರೂಪಾಯಿ ಒಂದು ನೂರ ಹದಿನಾಲ್ಕು ಮಾತ್ರ) |

**ಟೆಂಡರ್‌ದಾರರ ಗಮನಕ್ಕೆ:**

1. ಟೆಂಡರ್ ಲಕೋಟೆಯ ಮೇಲೆ "ಮೋದಿ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ ಕಡ್ಡಾಯವಾಗಿ ಬರೆಯತಕ್ಕದ್ದು.
2. ದರಗಳನ್ನು ಇದರೊಂದಿಗೆ ಲಗತ್ತಿಸಿರುವ ನಮೂನೆಯಲ್ಲಿಯೇ ನೀಡತಕ್ಕದ್ದು.
3. ನಮೂದಿಸುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
4. ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು (Comprehensive) ಡ್ರಮ್, ಡೆವಲಪರ್ ಹಾಗೂ ಟೋನರ್ ಹೊರತುಪಡಿಸಿ ಉಳಿದ ಎಲ್ಲಾ ಬಿಡಿಭಾಗಗಳನ್ನೊಳಗೊಂಡಿರಬೇಕು ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
5. ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.
6. ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
7. ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
8. ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು. ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣ ಆಧಾರದ ಮೇಲೆ ಪ್ರತಿ ಮೂರು (03) ತಿಂಗಳಿಗೊಮ್ಮೆ ನಾಲ್ಕು (04) ಸಮಾನ ಕಂತುಗಳಲ್ಲಿ ಸಂದಾಯ ಮಾಡಲಾಗುವುದು.
9. ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ.5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಸೇವಾ ನಿರ್ವಹಣೆಯ ಅವಧಿಯು ಮುಕ್ತಾಯಗೊಂಡ ನಂತರ ಅವರ ಕಾರ್ಯನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
11. ಅಯಶಸ್ಸು ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 20-09-2005 ರಂದು ಮಧ್ಯಾಹ್ನ 3:30 ಗಂಟೆಯೊಳಗೆ ಸಿ.ಆ.ಸು.ಇ (ಕಾರ್ಯಕಾರಿ), ಕೊಠಡಿ ಸಂಖ್ಯೆ:23, ನೆಲಮಹಡಿ, ವಿಧಾನಸೌಧ, ಬೆಂಗಳೂರು-560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
13. ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ.) ಮೊತ್ತ ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

**ಹೆಚ್.ಕೆ.ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಕಾರ್ಯಕಾರಿ-1)

**ಅನುಬಂಧ**

**ಸಂಖ್ಯೆ: ಸಿಆಸುಇ 97 ಡಿಟಿಎಂ 2005, ಬೆಂಗಳೂರು, ದಿನಾಂಕಃ22ನೇ ಆಗಸ್ಟ್, 2005**

ವಾರ್ಷಿಕ ಸೇವಾ ನಿರ್ವಹಣೆಯ ದರ

| ಕ್ರ.ಸಂ. | ಮೋದಿ ಕಾಪಿಯರ್ ಯಂತ್ರದ ನಮೂನೆ | ದರ ರೂ. (ಒಂದು ಯಂತ್ರಕ್ಕೆ) | ತೆರಿಗೆ |
|---|---|---|---|
| 1. | ಮಾದರಿ 1025 | | |
| 2. | ಮಾದರಿ 5216 | | |
| 3. | ಮಾದರಿ 5223 | | |
| 4. | ಮಾದರಿ 5620 | | |
| 5. | ಮಾದರಿ 5821-ಐವಿ | | |
| 6. | ಮಾದರಿ 5816-ಎಲ್‌ವಿ | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಹೆಚ್.ಕೆ.ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್.488 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಕಾರ್ಯಕಾರಿ-1)

## ಅರಣ್ಯ ಇಲಾಖೆ

## ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು-560 076

## ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2-ಬಿಯುಡಿ-ಸಿಆರ್-34-2005-06, ದಿನಾಂಕ:16ನೇ ಆಗಸ್ಟ್, 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2005-2006ನೇ ಸಾಲಿಗೆ ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ಬೆಂಗಳೂರು ಸಂಶೋಧನಾ ವಲಯದ ದೊರೆಸಾನಿಪಾಳ್ಯ ಸಂಶೋಧನಾ ಕೇಂದ್ರದಲ್ಲಿ ಕಾಂಪೌಂಡ್ ಕಾಮಗಾರಿಯನ್ನು ಕೈಗೆತ್ತಿಗೊಳ್ಳಲು ಈ ವಿಭಾಗದಲ್ಲಿ 2005-2006ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಸದರಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ.

ದಿನಾಂಕ: 16.09.2005 ರಂದು 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 3.30 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 27.09.2005ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಮತ್ತು ಟೆಂಡರ್ ಲಕೋಟೆಯನ್ನು 3.30 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

**ಷೆಡ್ಯೂಲ್**

| ಸಂಖ್ಯೆ | ವಲಯ | ಕಾಮಗಾರಿಗಳ ವಿವರ | ಅಂದಾಜು ಭೌತಿಕ ಪರಿಮಾಣ | ಅಂದಾಜು ಮೊತ್ತ (ಲಕ್ಷಗಳಲ್ಲಿ) | ನಿಗದಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಕ್ತಾಯಗೊಳಿಸುವ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಬೆಂಗಳೂರು | South-East Corner connected to arakere microlayout point- | 318Rmt | 8.40 | 25500.00 | 30.01.2006 | |
| | | South West Corner Starts After 37 mts point-2 & 3 between A & B. | 132 Rmt | 3.48 | 10500.00 | 30.01.2006 | |
| | | South East corner parallel to Arakere-micolayout Road, Point 39 & 40 between E & F. | 40 Rmt | 1.05 | 3200.00 | 30.01.2006 | |
| | | West Side Starting from New compound to the corner (Silver oak colony) point-E & F. | 32 Rmt | 0.88 | 2700.00 | 30.01.2006 | |
| | | Eastern Side near panduranga village (Bescom) point 39 & 37 between E & F. | 178 Rmt | 5.00 | 15000.00 | 30.01.2006 | |
| | | Eastern Side near Private Land. Point 37 & 38 between E & F- | 100 Rmt | 2.64 | 8000.00 | 30.01.2006 | |
| | | North South corner After S.I Gate near vinayaka nagar point-26 & 27 between C & D | 82 Rmt | 2.16 | 6500.00 | 30.01.2006 | |
| | | Eastern Side near 1991-92 Teak irrigated and Non irrigated pant point-33 & 37 between D & E | 57 Rmt | 1.60 | 5000.00 | 30.01.2006 | |

ಟೆಂಡರ್ ನಮೂನೆಯನ್ನು ದಿನಾಂಕ: 16.09.2005 ಮತ್ತು 27.09.2005ರಂದು 1.00 ಗಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಸೇರಿ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿ.ಡಿ. ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ:6 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 27.09.2005ರಂದು 1.00 ಗಂಟೆಯವರೆಗೆ ಪಡೆಯಬಹುದಾಗಿದೆ.

## ನಿಬಂಧನೆಗಳು

1. ಟೆಂಡರ್‌ದಾರರು 2005-06ನೇ ಸಾಲಿನಲ್ಲಿ ನೊಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ರೂ.2.00 ಕೋರ್ಟ್ ಫೀ ಸ್ಟಾಂಪ್ ಹಚ್ಚಿದ ಹಾಗೂ ಅಂದಾಜು ವೆಚ್ಚದ ಶೇಕಡ 3.00 ಇ.ಎಂ.ಡಿ. ಹಣವನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರುರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ಕಾಂಪೌಂಡ್ ಗೋಡೆ ನಿರ್ಮಿಸಲು ಟೆಂಡರ್ ಎಂದು ನಮೂದಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು. ಟೆಂಡರ್‌ಫಾರಂ ಬೆಲೆ ರೂ.200.00 (ತೆರಿಗೆಗಳು ಸೇರಿ).
5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿತರಣೆ ಮಾದರಿ ರೀತ್ಯವೇ ಮಾಡಬೇಕು. ಹಾಗೂ ಅಂದಾಜು ಪಟ್ಟಿಗಳನ್ನು ತಯಾರಿಸಿ ಪಿ.ಡಬ್ಲ್ಯೂ.ಡಿ. ಯಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ (ತಾಂತ್ರಿಕ ಪರಿಶೀಲನೆ ವೆಚ್ಚವನ್ನು ಇಲಾಖಾ ವತಿಯಿಂದ ಭರಿಸಲಾಗುವುದು). ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರು ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.
6. ದಿನಾಂಕ: 16.09.2005 ಮತ್ತು 27.09.2005ರ ಸಂಜೆ 3.00 ಗಂಟೆ ವೇಳೆಯವರೆಗೆ ಟೆಂಡರನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.
7. ದಿನಾಂಕ: 16.09.2005 ಮತ್ತು 27.09.2005ರ ಸಂಜೆ 3.30 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯರವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9. ಪಿ.ಡಬ್ಲ್ಯೂ.ಡಿ. ದರಗಳಲ್ಲದ ಕೆಲಸ, ವಸ್ತುಗಳಿಗೆ ಡಾಟಾ ಶೀಟ್ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧೀಕ್ಷಕ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರು, ಕಾರ್ಯಾದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ.200.00ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಂಡು ಕೆಲಸದ ಆದೇಶ ಪಡೆಯುವುದು.
11. ಗುತ್ತಿಗೆದಾರರು ಸೂಚಿಸಬಹುದಾದ ಯಾವುದೇ ಷರತ್ತು/ ಷರತ್ತಿನ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
12. ಇ.ಎಂ.ಡಿ. ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕೆಲಸ ಮುಗಿದ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13. ಯಶಸ್ವಿ ಟೆಂಡರ್‌ದಾರರಿಂದ ಇ.ಎಂ.ಡಿ. ಜೊತೆಯಲ್ಲಿ ಶೇಕಡ 10ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ 6 ತಿಂಗಳ ನಂತರ ಹಿಂತಿರುಗಿಸಲಾಗುವುದು.
14. ಪ್ರತಿ ಬಿಲ್‌ನಲ್ಲಿ ಶೇಕಡ 2ರಷ್ಟನ್ನು ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾಜನ್ನು ಮತ್ತು ನಿಯಮದಂತೆ ಮಾರಾಟ ತೆರಿಗೆಯನ್ನು ಹಿಡಿಯಲಾಗುವುದು.
15. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ ಮತ್ತು ಬಳಕೆ ವೃತ್ತ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
16. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿ.ಡಬ್ಲ್ಯೂ.ಡಿ. 2005-06ನೇ ಸಾಲಿನ ದರಕ್ಕಿಂತ ಶೇಕಡ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ಸ್ಪಷ್ಟವಾಗಿ ಸಂಖ್ಯೆ ಮತ್ತು ಪದಗಳಲ್ಲಿ ನಮೂದಿಸಬೇಕು.
17. ಕೆಲಸದ ಆದೇಶ ನೀಡಿದ ದಿನಾಂಕದಿಂದ ನಿಗದಿ ಪಡಿಸಿದ ದಿನಾಂಕದೊಳಗೆ ಕೆಲಸವನ್ನು ಪೂರೈಸತಕ್ಕದ್ದು.
18. ಟೆಂಡರ್‌ದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ: ನಷ್ಟ ಸಂಭವಿಸಿದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೇ ಹೊಣೆಗಾರರಾಗಿರುತ್ತಾರೆ.
19. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು: ಅರಣ್ಯ ಕೃಷಿಕರು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್‌ನ್ನು ಪಾವತಿಸತಕ್ಕದ್ದು.
20. ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
21. ಅರಣ್ಯ ಕೃಷಿಕರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
22. ಸಾರ್ವತ್ರಿಕ ರಜೆದಿನಗಳಲ್ಲಿ ಕೆಲಸ ಮಾಡಬೇಕಾದರೆ ಅರಣ್ಯ ಕೃಷಿಕರುಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
23. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಅರಣ್ಯ ಕೃಷಿಕರಿಗೆ ತೃಪ್ತಿಕರವಾಗದೆ ಇದ್ದಲ್ಲಿ ಆ ಕೆಲಸಕ್ಕೆ ಅರಣ್ಯ ಕೃಷಿಕರ ತೀರ್ಮಾನವೇ ಅಂತಿಮವಾದುದು.
24. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು.
25. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗದಿಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು: ಅರಣ್ಯ ಕೃಷಿಕರು ನಿಗದಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.
26. ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ: ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದುಕೊಳ್ಳಲಾಗುವುದು.
27. ಟೆಂಡರ್‌ದಾರರು ನಿಗದಿತ ಅವಧಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾವತಿಯಿಂದ ಮಾಡಿಸಲು ಅರಣ್ಯ ಕೃಷಿಕರಿಗೆ ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಅರಣ್ಯ ಕೃಷಿಕರು ಕೆಲಸದ ಬಗ್ಗೆ ನೀಡಿದ ದೃಢೀಕರಣ ಪತ್ರವೇ ಅಂತಿಮವಾಗಿರುತ್ತದೆ.

28. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
29. ಟೆಂಡರ್‌ದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಅರಣ್ಯ ಕೃಷಿಕರುಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
30. ಕೆಲಸದಲ್ಲಿ ಏನಾದರೂ ಬದಲಾವಣೆ: ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ಧವಾಗಿರುವುದಿಲ್ಲ.
31. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ದರಾಗಿರಬೇಕು.
32. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಅರಣ್ಯ ಕೃಷಿಕರು ನಿಗದಿಪಡಿಸುವ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.
33. ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದುಪಡಿಸುವುದಲ್ಲದೆ ಇ.ಎಂ.ಡಿ. ಮತ್ತು ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
34. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದ್ದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.
35. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸುವ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.
36. ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.
37. ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರು ರವರ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
38. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.
39. ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ತೆರಿಗೆದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
40. ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
41. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
42. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ. ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.
43. ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ, ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
44. ಪಿ.ಡಬ್ಲ್ಯೂ.ಡಿ. ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.
45. ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.
46. ನಮೂದಿಸಿದ ದರಗಳಲ್ಲಿ ಸಾಮಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.
47. ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು. ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
48. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.
49. ಟೆಂಡರ್‌ದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.
50. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
51. ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2005-06ರ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಂತಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2005-06ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ 2006-07ನೇ ಸಾಲಿಗೆ ಸದರಿ ಕೆಲಸ ಮುಂದುವರಿದಲ್ಲಿ (ಅಂದರೆ ಆರು ತಿಂಗಳ ಗಡುವಿನೊಳಗೆ) 2005-06ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯ ನಿರ್ವಹಿಸಬೇಕಾಗುತ್ತದೆ.
52. ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.
53. ಕರ್ನಾಟಕ ಮಾರಾಟ ತೆರಿಗೆ ಅಡಿಯಲ್ಲಿ ನೊಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ, ಮಾರಾಟ ತೆರಿಗೆ ತಿರುವಳಿ ಪ್ರಮಾಣ ಪತ್ರವನ್ನು (Sales Tax Clearance Certificate) ಲಗತ್ತಿಸಬೇಕು.
54. ಸೂರ್ಯೋದಯಕ್ಕೆ ಮುಂಚೆ ಹಾಗೂ ಸೂರ್ಯ ಮುಳುಗಿದ ನಂತರ ಯಾವುದೇ ರೀತಿಯ ನಿರ್ಮಾಣ ಕಾರ್ಯಗಳನ್ನು ಗುತ್ತಿಗೆದಾರರು ಮಾಡಬಾರದು.

ಪಿ.ಆರ್.490 ಅರಣ್ಯ ಕೃಷಿಕರು, ಕೇಂದ್ರವಲಯ, ಬೆಂಗಳೂರು.